ಕಾಯಕವೇ ಕೈಲಾಸ



# ಸಿದ್ಧಗಂಗಾ



ಪರಿಸರ ರಕ್ಷಣೆ ನಮ್ಮೆಲ್ಲರ ಹೊಣೆ

ಬಸವ ಜಯಂತಿಯ ಹಾರ್ದಿಕ ಶುಭಾಶಯಗಳು

ಸಂಪುಟ : ೫೭ ಮೇ-ಜೂನ್ ೨೦೨೧ ಸಂಚಿಕೆ : ೦೫-೦೬

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೪ನೇ ಜನ್ಮದಿನಾಚರಣೆ ಅಂಗವಾಗಿ ಶ್ರೀಮಠದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಶಿವಯೋಗಿಗಳ ಗದ್ದುಗೆಗೆ ವಿಶೇಷ ಪೂಜೆ ಸಲ್ಲಿಸಲಾಯಿತು. ಈ ಸಂದರ್ಭದಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಉಪಸ್ಥಿತರಿದ್ದರು.



ತುಮಕೂರು ನಾಗರಿಕ ಸಮಿತಿ ಏಪ್ರಿಲ್ ೧ ರಂದು ತುಮಕೂರಿನಲ್ಲಿ ಏರ್ಪಡಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರ ೧೧೪ನೇ ಜಯಂತೋತ್ಸವವನ್ನು ಪರಮಪೂಜ್ಯ ಶ್ರೀ ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರು ಹಾಗೂ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಜ್ಯೋತಿ ಬೆಳಗಿಸಿ ಉದ್ಘಾಟಿಸಲಾಯಿತು. ಈ ಸಂದರ್ಭದಲ್ಲಿ ಹರಗುರು ಚರಮೂರ್ತಿಗಳು ಹಾಗೂ ಗಣ್ಯರು ಉಪಸ್ಥಿತರಿದ್ದರು.



ಮೇ ೨ ರಂದು ಶ್ರೀಮಠದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಕೋವಿಡ್ ಕೇರ್ ಸೆಂಟರ್‌ನ್ನು ತುಮಕೂರು ಜಿಲ್ಲಾ ಉಸ್ತುವಾರಿ ಸಚಿವ ಶ್ರೀ ಜೆ.ಸಿ. ಮಾಧುಸ್ವಾಮಿ ಅವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಸಂಸದ ಶ್ರೀ ಜಿ.ಎಸ್. ಬಸವರಾಜು, ಜಿಲ್ಲಾಧಿಕಾರಿ ಶ್ರೀ ವೈ.ಎಸ್. ಪಾಟೀಲ, ಜಿಲ್ಲಾ ಆರೋಗ್ಯಾಧಿಕಾರಿ ಡಾ. ನಾಗೇಂದ್ರಪ್ಪ ಅವರು ಉಪಸ್ಥಿತರಿದ್ದರು.




## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



# ಸಿದ್ಧಗಂಗಾ

ಸಂಪುಟ : ೫೭ ಮೇ-ಜೂನ್ ೨೦೨೧ ಸಂಚಿಕೆ : ೦೫-೦೬


ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು

ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು :
ಕೆ.ಬಿ. ಶಿವಶಂಕರಯ್ಯ
ಮೊ : ೯೭೪೧೦ ೭೬೮೦೬

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ವಿ. ಸೋಮಶೇಖರಯ್ಯ
ಎನ್.ವಿ. ಸತೀಶ್‌ಕುಮಾರ್

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.


## ಒಳಪುಟಗಳಲ್ಲಿ ..................




ಚಂದಾ ವಿವರ :
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00


email: siddaganganews@gmail.com





# ಪ್ರಧಾನ ಸಂಪಾದಕರ ನುಡಿ.......

ಹನ್ನೆರಡನೆ ಶತಮಾನ ಸಾಮಾಜಿಕ, ಧಾರ್ಮಿಕ ಹಾಗೂ ರಾಜಕೀಯವಾಗಿ ಸಮಷ್ಟಿ ಸಮಾಜದ ಉನ್ನತಿಗಾಗಿ ನಡೆದ ಆಂದೋಲನ ಒಂದು ವರ್ಗಕ್ಕೆ, ಒಂದು ಸಮಾಜಕ್ಕೆ ಸೀಮಿತವಾಗಿರಲಿಲ್ಲ. ಈ ಆಂದೋಲನ ಒಬ್ಬ ವ್ಯಕ್ತಿಯ ಮಾನಸಿಕ, ಭೌತಿಕದ ಮೇಲೆ ಯಾವುದೇ ರೀತಿಯ ಒತ್ತಾಯವಿಲ್ಲದೆ, ಸೌಮ್ಯತೆ, ಸಜ್ಜನಿಕೆಯ ರೇಖೆಯನ್ನು ದಾಟದೆ ಬೌದ್ಧಿಕತೆಯನ್ನು ಪ್ರೇರೇಪಿಸುವ ಒಂದು ವಿಶಿಷ್ಟ ವೈಚಾರಿಕ ಚಳವಳಿಯಾಗಿತ್ತು. ಜಾತಿ ರಹಿತ ಆದರ್ಶ ಸಮಾಜ ನಿರ್ಮಾಣ, ಅಂತಹ ಸಮಾಜದ ಸರ್ವಾಂಗೀಣ ಅಭಿವೃದ್ಧಿ ಆಂದೋಲನದ ಹಿಂದಿನ ಆಶಯವಾಗಿತ್ತು.

ಕರ್ನಾಟಕದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಧಾರ್ಮಿಕ ಕ್ರಾಂತಿಯ ಜೊತೆಗೆ ಸಾಮಾಜಿಕ ಪರಿವರ್ತನೆಗೆ ಭೂಮಿಕೆ ಸಿದ್ಧವಾಯಿತು. ಬಹುಶಃ ನಮ್ಮ ಧಾರ್ಮಿಕ ಹಾಗೂ ಸಾಮಾಜಿಕ ಇತಿಹಾಸದಲ್ಲಿ ಬಸವಣ್ಣನವರ ವಿಚಾರಗಳು ಸರ್ವತಾ ಪಾಲಿಸುವಂತಹ ಜೀವನ ಮೌಲ್ಯಗಳೆನಿಸಿದವು. ಬಸವಣ್ಣನವರ ಮುಂದೆ ಆಗ ಎರಡು ಮುಖ್ಯವಾದ ಸಮಸ್ಯೆಗಳಿದ್ದವು. ಮೊದಲನೆಯದು ಧರ್ಮದ ಹೆಸರಿನಲ್ಲಿ ಅಂದಿನ ಸಮಾಜ ನಿರ್ಮಿಸಿಕೊಂಡ ಸಾಮಾಜಿಕ ವಿಷಮತೆ, ಮೇಲು ಕೀಳುಗಳೆಂಬ ಜಾತಿಯ ಗಟ್ಟಿಯಾದ ಅಡ್ಡಗೋಡೆಗಳು. ಇವುಗಳ ಜೊತೆಗೆ ವೈಯಕ್ತಿಕವಾದ ಉಪಾಸನೆಯ ಸಂಪ್ರದಾಯಗಳು ಹಾಗೂ ಆಳಕ್ಕೆ ಬೇರುಬಿಟ್ಟಿದ್ದ ಅಂಧ ಶ್ರದ್ಧೆಗಳು, ಇದರ ಪ್ರಭಾವದಿಂದ ಬೆಳೆದು ಬಂದ ಶೋಷಣೆಯ ಸಾಧನವಾಗಿದ್ದುದು ಸಮಸ್ಯೆಯ ಇನ್ನೊಂದು ಮುಖ. ಈ ಎರಡು ಸಮಸ್ಯೆಗಳನ್ನು ಬಸವಣ್ಣನವರ ಪ್ರಖರವಾದ ವಿಚಾರವಾದ ಸಮಸ್ಯೆಯ ಬೇರುಗಳನ್ನು ಕತ್ತರಿಸಿ ಹಾಕಿತು. ಧರ್ಮ ಒಂದು ವರ್ಗಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಧರ್ಮದ ಎದುರಿನಲ್ಲಿ ಮಾನವರೆಲ್ಲರೂ ಸರ್ವಸಮಾನರು ಎಂಬುದನ್ನು ಕಾರ್ಯತಃ ಸಾಧಿಸಿ ತೋರಿಸುವ ಸಾಹಸಕ್ಕೆ ಕೈ ಹಾಕಿದರು.

ಜ್ಞಾನ ಪಡೆಯುವುದು ಎಲ್ಲರ ಮೂಲಭೂತ ಹಕ್ಕು ಎಂದು ಹೇಳಿ ಅದರಂತೆ ನಡೆದುಕೊಂಡಿದ್ದರಿಂದಲೇ ಆವರೆಗೆ ವಿದ್ಯೆಯಿಂದ ವಂಚಿತರಾಗಿದ್ದ ಸಮಾಜದಲ್ಲಿನ ಕೆಳವರ್ಗದವರು ಅಗಸ್ತ್ಯನ ದಾಹದಿಂದ ಜ್ಞಾನಾರ್ಜನೆಯ ಕಾರ್ಯದಲ್ಲಿ ಮಗ್ನವಾಯಿತು. ವಿಭಿನ್ನ ವೃತ್ತಿಗೆ ಸಂಬಂಧಿಸಿದ ವ್ಯಕ್ತಿಗಳೆಲ್ಲ ಜ್ಞಾನಕ್ಕಾಗಿ ಹಾತೊರೆದುದಷ್ಟೇ ಅಲ್ಲದೆ ತಾವೂ ವಿಚಾರವಂತರಾಗಿ ವೈಚಾರಿಕ ಮನೋಭಾವವನ್ನು ಬೆಳೆಸಿಕೊಂಡರಲ್ಲದೆ ಪ್ರತಿಭಾವಂತ ವಚನಕಾರರಾಗಿ ರೂಪುಗೊಂಡು ಒಂದು ವಿಸ್ಮಯ ಲೋಕವನ್ನೇ ನಿರ್ಮಿಸಿದುದು ಒಂದು ಅಪೂರ್ವ ಚಾರಿತ್ರಿಕ ದಾಖಲೆ. ಬಸವಣ್ಣನವರ ಸಾಮಾಜಿಕ, ಧಾರ್ಮಿಕ ಚಳವಳಿಯ ವೈಚಾರಿಕ ನಿಲುವಿನಿಂದ ಅದುವರೆಗೂ ಕತ್ತಲೆಯ ಕೋಣೆಯಲ್ಲಿಯೇ ತಮ್ಮ ಜೀವನವನ್ನು ವ್ಯರ್ಥವಾಗಿ ಕಳೆಯುತ್ತಿದ್ದ ಸ್ತ್ರೀಯರಿಗೂ ಅರಿವಿನ ಬಾಗಿಲು ತೆರೆದಂತಾಯಿತು. ಆಯ್ದಕ್ಕಿ ಲಕ್ಕಮ್ಮ, ಮೋಳಿಗೆ ಮಹಾದೇವಿ, ಬೊಂತಾದೇವಿ, ನೀಲಮ್ಮ, ಗಂಗಾಂಬಿಕೆ, ಗೊಗ್ಗವ್ವೆ, ನಾಗಮ್ಮ, ಕಾಳವ್ವೆ, ಕಸಗುಡಿಸುವ ಕಾಯಕದ ಸತ್ಯಕ್ಕ, ಕದಿರೆ ಕಾಯಕದ ರೆಮ್ಮವ್ವೆ, ಕೊಟ್ಟಣದ ಸೋಮವ್ವೆ, ಮಸಣಯ್ಯಗಳ ಪುಣ್ಯಸ್ತ್ರೀ ಮಸಣಮ್ಮ ಮೊದಲಾದ ಮಹಿಳೆಯರು ಶಿಕ್ಷಣ ಪಡೆದುದರ ಫಲವಾಗಿ ವೈಚಾರಿಕ ನೆಲೆಯಲ್ಲಿ ನಿಂತು ಚಿಂತನೆ ಮಾಡಿ ತಮ್ಮ ಅಭಿಪ್ರಾಯಗಳನ್ನು ಮುಕ್ತವಾಗಿ ವಚನಗಳ ಮೂಲಕ ಅಭಿವ್ಯಕ್ತಿಪಡಿಸಲು ಸಾಧ್ಯವಾಯಿತು. ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಇದೊಂದು ಅಪೂರ್ವ ಸಾಧನೆ ಎನ್ನಬಹುದು.

ಬಸವಾದಿ ಶರಣರು ಸಮಾಜಕ್ಕೆ ನೀಡಿದ ಅದ್ಭುತ ಕೊಡುಗೆಯಿಂದ ಕಾಯಕ ಮತ್ತು ದಾಸೋಹ. ಸಮಾಜ ಅಭಿವೃದ್ಧಿ ಪಥದಲ್ಲಿ ಮುನ್ನಡೆಯಬೇಕಾದರೆ ಪ್ರತಿಯೊಬ್ಬರೂ ದುಡಿಯಬೇಕು. ಹಾಗೆ ಪ್ರಾಮಾಣಿಕತೆಯಿಂದ ಬಂದ ಗಳಿಕೆಯಲ್ಲಿ ಸ್ವಲ್ಪ ಭಾಗವನ್ನು ದಾಸೋಹ ರೂಪದಲ್ಲಿ ಸಮಾಜಕ್ಕೆ ವಿನಿಯೋಗಿಸಬೇಕು ಎಂಬ ತತ್ತ್ವವನ್ನು ಆಚರಣೆಗೆ ತರುವಲ್ಲಿ ಅರಿವು ಮೂಡಿಸಿದರು.

ಬಸವಾದಿ ಶರಣರು ನುಡಿದಂತೆ ನಡೆದರು. ಅವರ ಜೀವನ ತೆರೆದಿಟ್ಟ ಪುಸ್ತಕದಂತಿತ್ತು. ನಾವಿಂದು ಅವರು ಬಿತ್ತಿಹೋದ ಆದರ್ಶಗಳನ್ನು, ಮೌಲ್ಯಗಳನ್ನು ವೇದಿಕೆಗಳಲ್ಲಿ ನುಡಿಯುವುದಷ್ಟಕ್ಕೇ ಸೀಮಿತಗೊಳಿಸಿದ್ದೇವೆ. ಬಸವಣ್ಣನವರು ಅಂತರಂಗ ಶುದ್ಧಿಯಾಗದ ಹೊರತು ಬಹಿರಂಗಕ್ಕೆ ಮೌಲ್ಯ ಬರುವುದಿಲ್ಲ ಎಂದು ಹೇಳಿದರು. ನಾವಿಂದು ಅಂತರಂಗವನ್ನು ಕಲುಷಿತವನ್ನಾಗಿ ಮಾಡಿಕೊಂಡು ಬಹಿರಂಗದ ಸೌಂದರ್ಯಕ್ಕೆ ಹೆಚ್ಚು ಮಹತ್ವ ಕೊಡುತ್ತಾ ಬಂದಿದ್ದೇವೆ. ಅಂತರಂಗ ಶುದ್ಧಿಯಾಗದ ಹೊರತು ಬಹಿರಂಗಕ್ಕೆ ಶೋಭೆ ಬರುವುದಿಲ್ಲ ಎಂಬುದನ್ನು ಮರತಿದ್ದೇವೆ. ಬುದ್ಧ, ಏಸುಕ್ರಿಸ್ತ, ಶಂಕರಾಚಾರ್ಯ, ಬಸವಣ್ಣ, ಸರ್ವಜ್ಞ, ಡಾ. ಬಿ.ಆರ್. ಅಂಬೇಡ್ಕರ್‌ರ ನುಡಿ ಸಂದೇಶಗಳು ಎಲ್ಲರೂ ಜೀವನದಲ್ಲಿ ಅಳವಡಿಸಿಕೊಂಡು ಅನುಸರಿಸಬೇಕಾದ ಸಾರ್ವಕಾಲಿಕವಾದ ಮೌಲ್ಯಗಳು.

ಕೊರೋನಾ ಮಹಾಮಾರಿ ಅಟ್ಟಹಾಸದಿಂದ ಮೆರೆಯುತ್ತಿದ್ದು ದೇಶದಲ್ಲಿ ಪ್ರತಿದಿನ ಲಕ್ಷಾಂತರ ಜನರಿಗೆ ರೋಗ ಲಕ್ಷಣಗಳು ಕಂಡುಬರುತ್ತಿದ್ದು, ಸಾವಿರಾರು ಜನ ಸಾವನ್ನಪ್ಪುತ್ತಿದ್ದಾರೆ. ಇದಕ್ಕೆ ಕರ್ನಾಟಕವೂ ಹೊರತಾಗಿಲ್ಲ. ಪ್ರತಿದಿನ ರೋಗಿಗಳ ಸಂಖ್ಯೆ ಏರುತ್ತಲೇ ಇದೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ರೋಗವನ್ನು ಹಿಮ್ಮೆಟ್ಟಿಸಲು ಹಲವಾರು ಕಾರ್ಯಕ್ರಮವನ್ನು ಹಮ್ಮಿಕೊಂಡು ಜನರಿಗೆ ಎಚ್ಚರಿಕೆ ನೀಡುತ್ತಿದ್ದರೂ ಜನರು ಅರ್ಥಮಾಡಿಕೊಳ್ಳದೆ ಮಾಸ್ಕ ಧರಿಸದೆ, ಅಂತರ ಕಾಪಾಡಿಕೊಳ್ಳದ ಪರಿಣಾಮವಾಗಿ ಭಯದ ವಾತಾವರಣವನ್ನುಂಟು ಮಾಡಿದೆ. ಈ ನಿಟ್ಟಿನಲ್ಲಿ ಸರ್ಕಾರದ ಜೊತೆಗೆ ಸಾರ್ವಜನಿಕರು ಸಹಕರಿಸಬೇಕಾಗಿದೆ. ಪ್ರತಿಯೊಬ್ಬರು ಕೋವಿಡ್ ಲಸಿಕೆಯನ್ನು ತೆಗೆದುಕೊಳ್ಳಬೇಕು. ಇದರಿಂದ ಭಯಾನಕವಾಗಿ ಕಾಡುತ್ತಿರುವ ಕೊರೋನಾ ಮಹಾಮಾರಿಯನ್ನು ನಿಯಂತ್ರಿಸಬಹುದಾಗಿದೆ.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಪ್ರಧಾನ ಸಂಪಾದಕರು









## ಶ್ರೀವಾಣಿ

# ವಚನ ಸಾಹಿತ್ಯ – ಬಸವಣ್ಣನವರು

ವಚನ ಸಾಹಿತ್ಯ ಅನುಭಾವಿಗಳ ಸಾಹಿತ್ಯ. ಅದು ಅಡಂಬರಕ್ಕಾಗಿಯಾಗಲೀ ಪ್ರದರ್ಶನಕ್ಕಾಗಿಯಾಗಲೀ, ಪ್ರಚಾರ ಪ್ರಿಯತೆಗಾಗಿಯಾಗಲೀ ಬಂದದ್ದಲ್ಲ. ಸತ್ಯ ದರ್ಶನಕ್ಕಾಗಿ, ಆತ್ಮಸಾಕ್ಷತ್ಕಾರಕ್ಕಾಗಿ, ಚಿತ್ತ ಶುದ್ಧಿಯ ಅಭಿವ್ಯಕ್ತಿಯಾಗಿ, ಅಮೃತಗಣ ದೇವಗಣ ಎನ್ನದೆ, ಸಾಧಕನ, ಅನುಭಾವಿಯ, ಬಗೆಗೆನುಗುಣವಾಗಿ ಅವತರಿಸಿದ್ದು. ಭಾವಕ್ಕನುಗುಣವಾಗಿ ಭಾಷೆಯನ್ನು ಸಂಸ್ಕರಣಗೊಳಿಸಿದ್ದು ಅದರ ವಿಶೇಷ.

ಹನ್ನೆರಡನೆಯ ಶತಮಾನದಲ್ಲಿ ಸೃಷ್ಟಿಯಾದ ವಚನ ಸಾಹಿತ್ಯ, ಮಹೋನ್ನತವಾದ ಜೀವನ ಮೌಲ್ಯಗಳನ್ನು ಸಾಕಾರಗೊಳಿಸುವ ಮಾಧ್ಯಮವಾಯಿತು. ಅಂತೆಯೇ ಲೋಕ ಕಲ್ಯಾಣದಲ್ಲಿ ಆತ್ಮಕಲ್ಯಾಣವನ್ನು ಕಾಣುವ ಶ್ರೇಷ್ಠ ದೃಷ್ಟಿಯನ್ನು ನೀಡಿತು. ಜೀವನೋತ್ಸಾಹ, ಜೀವನ ಪ್ರೀತಿ, ಜೀವ-ಶಿವರ ಸಂಬಂಧವನ್ನು ತೆರೆದು ತೋರಿತು. ಅನುಭಾವವೇ ಅರಿವಿಗೆ ಆಶ್ರಯವಾಗಿ, ಸ್ವಾನುಭಾವದಿಂದ ಉಪನಿಷದ್ರಹಸ್ಯಗಳನ್ನು ಬಯಲು ಮಾಡಿತು.

ಬಸವಣ್ಣನವರು ಲೋಕಪೂಜ್ಯರು, ಜಗತ್ತು ಕಂಡ ವಿಸ್ಮಯ. ಅವರದು ಬೆಳಕಿನ ನುಡಿ, ವ್ಯಷ್ಟಿ-ಸಮಷ್ಟಿಗಳ ಸಮನ್ವಯ, ಅಂಗ ಲಿಂಗಗಳ ಸಂಗಮ, ಇಹಪರಗಳ ಜೋಡಣೆ, ಗೃಹಸ್ಥ ಜೀವನದ ಪರಮ ಪಾವಿತ್ರ್ಯತೆ, ಮೇಲು ಕೀಳುಗಳ ಉಚ್ಚಾಟನೆ, ಕಾಯಕ ದಾಸೋಹಗಳ ಶಿವಪಥ, ಅಧ್ಯಾತ್ಮ ನಿಷ್ಕ್ರಿಯತೆಯನ್ನು ಬೋಧಿಸುವ ಮಾಧ್ಯಮವಲ್ಲವೆಂಬ ಅರಿವು, ಜ್ಞಾನ-ಕ್ರಿಯೆಗಳ ಸಂಗಮ, ಅಲ್ಲಿ-ಇಲ್ಲಿ ಸಲ್ಲುವ ಜೀವನಕ್ರಮ, ವ್ಯಕ್ತಿ ಉದ್ಧಾರಕ್ಕೆ, ಸಂಪೂರ್ಣತೆಗೆ ವಿಶ್ವವಿಭೂತಿ ಬಸವ ತತ್ತ್ವಗಳ ಅನುಸರಣೆಯೇ ಪರಿಪೂರ್ಣ ಮಾರ್ಗ.

ದಲಿತ ಸೂರ್ಯ ಬಸವಣ್ಣ ಜಾಗತಿಕ ಇತಿಹಾಸದ ಉಜ್ವಲ ಧರ್ಮ ದ್ರಷ್ಟಾರ. ಸ್ವಾಮಿ ವಿವೇಕಾನಂದರಿಗಿಂತ, ಮಹಾತ್ಮ ಗಾಂಧೀಜಿಯವರಿಗಿಂತ, ಡಾ. ಅಂಬೇಡ್ಕರ್‌ರಿಗಿಂತ ಮೊದಲು ಅಸ್ಪೃಶ್ಯತೆಯ ಬಗ್ಗೆ ವಿರೋಧ ವ್ಯಕ್ತಪಡಿಸಿದ, ಹೋರಾಟ ನಡೆಸಿದ, ಅವರೊಡನೆ ತಮ್ಮನ್ನು ಸಮೀಕರಿಸಿಕೊಂಡ, ಅಸ್ಪೃಶ್ಯರ ಉದ್ಧಾರದಲ್ಲಿ ಅತ್ಮ ಸಾಕ್ಷಾತ್ಕಾರ ಕಂಡುಕೊಂಡ, ಪದವಿ ಪಟ್ಟವನ್ನೂ ತ್ಯಾಗ ಮಾಡಿದ ಆದರ್ಶ ಪುರುಷ ಬಸವಣ್ಣನವರು.

ಇತಿಹಾಸದಲ್ಲಿ ೧೨ನೆಯ ಶತಮಾನ ಬೆಳಕಿನ ಯುಗ. ಅದಕ್ಕೆ ಕಾರಣರಾದವರು ಬಸವಣ್ಣನವರು. ಆ ಮಹಾನುಭಾವರ ವಿಚಾರಧಾರೆ ಎಂದೆಂದಿಗೂ ಪ್ರಸ್ತುತ. ಕಾಲ-ದೇಶಗಳನ್ನು ಗೆದ್ದು ನಿಂತಿವೆ ಬಸವತತ್ತ್ವಗಳು. ಅವು ನಿತ್ಯನೂತನ; ಸತ್ಯದರ್ಶನವಾಗಿವೆ. ಶತ ಶತಮಾನಗಳಿಂದ ಹೆಪ್ಪುಗಟ್ಟಿದ ಚಿಂತನೆಗಳನ್ನು ಕಡೆದು ನವನೀತ ತೆಗೆದ ವಿಚಾರಶೀಲ ಬಸವಣ್ಣನವರು ಮಾಡಿದ ಮಹೋನ್ನತ ಬದಲಾವಣೆ ಎಂದರೆ ಜನ ಜಾಗೃತರಾಗುವಂತೆ ಮಾಡಿದ್ದು. ಜನರನ್ನು ತಿದ್ದುವ ಮಹಾಮಣಿಹದಲ್ಲಿ ಅರ್ಪಣಾ ಮನೋಭಾವದಿಂದ ಕ್ರಿಯಾಶೀಲರಾದ ಕರ್ಮಚಾರಿ, ಆಚಾರ್ಯಶ್ರೇಷ್ಠ, ಸಮಾಜ ವಿಜ್ಞಾನಿ, ರಾಜಕೀಯ ದಾರ್ಶನಿಕ ಬಸವಣ್ಣನವರು ಪ್ರಜಾಪ್ರಭುತ್ವವಾದಿ.

# ವಚನ-ತ್ರಿವಿಧಿ

## ಶ್ರೀ ಸಿದ್ಧಲಿಂಗೇಶ್ವರ ವಚನ



**ಮುಖದಲ್ಲಿ ಮಂತ್ರ, ಹೃದಯದಲ್ಲಿ ಧ್ಯಾನ**
**ಪ್ರಾಣದಲ್ಲಿ ಲಿಂಗನೆನಹು ಕರಿಗೊಂಡ**
**ಶಿವಾತ್ಮಶರಣನ ಹೃದಯವೆ**
**ಪರಮೇಶ್ವರಂಗೆ ನಿವಾಸಸ್ಥಾನ ನೆಲೆವನೆಯಾಗಿಪ್ಪುದಯ್ಯಾ,**
**ಆ ಪರಮೇಶ್ವರನೊಳಗಣ ಸಮರಸಭಾವವೆ**
**ಆ ಶರಣಂಗೆ ನಿತ್ಯನೇಮವೆ ಪೂಜೆಯಾಗಿಪ್ಪುದಯ್ಯಾ,**
**ಇದೆ ಪೂರ್ಣ ಶರಣಭಾವ, ಅಲ್ಲಿಯೇ ಲಿಂಗಸಿದ್ಧಿ,**
**ಘನಲಿಂಗಪದಸ್ಥಿತಿ, ಲಿಂಗಪೂಜೆ**
**ಮತ್ತಲ್ಲಿಯ ನಿಶ್ಚಯವದೇ ಪರಮಾರ್ಥ**
**ಅದಲ್ಲದೆ ಅನ್ಯಮಪ್ಪೆಲ್ಲವು ಆತ್ಮದುಃಖ ಕಾಣಾ,**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ಮುಖದಲ್ಲಿ ಮಂತ್ರ – ಜಿಹ್ವೆಯಲ್ಲಿ, ಮಂತ್ರ – ಷಡಕ್ಷರಿ ಮಂತ್ರವು; ಹೃದಯದಲ್ಲಿ – ಅಂತರಂಗದಲ್ಲಿ, ಧ್ಯಾನ–ಲಿಂಗಧ್ಯಾನ ಲಿಂಗಸ್ಮರಣೆಯು; ಪ್ರಾಣದಲ್ಲಿ ಲಿಂಗ ನೆನಹು: ಪ್ರಾಣದಲ್ಲಿ – ಪ್ರಾಣನಲ್ಲಿ, ಲಿಂಗ–ಪ್ರಾಣಲಿಂಗವು, ನೆನಹು–ಲಿಂಗಧ್ಯಾನ ಲಿಂಗಸ್ಮರಣೆಯು, ಕರಿಗೊಂಡ–ಇಂಬುಗೊಂಡ, ಶಿವಾತ್ಮಶರಣನ : ಶಿವಾತ್ಮ–ಶಿವನಂಶೀಭೂತವಾದ, ಶರಣನ–ಶಿವಶರಣನ, ಹೃದಯವೆ–ಅಂತರಂಗವೆ, ಪರಮೇಶ್ವರಂಗೆ–ಪ್ರಾಣಲಿಂಗಕ್ಕೆ, ನಿವಾಸಸ್ಥಾನ–ಆಲಯಸ್ಥಾನವು, ನೆಲೆವನೆಯಾಗಿಪ್ಪುದಯ್ಯಾ–ಸ್ಥಿರವಮನೆಯಾಗಿಪ್ಪುದಯ್ಯಾ, ಆ ಪರಮೇಶ್ವರನೊಳಗಣ– ಆ ಪ್ರಾಣಲಿಂಗದೊಳಗಣ, ಸಮರಸಭಾವವೆ–ಅವಿರಳಭಾವದಿಂದ ಏಕರಸವಾಗುವ, ಅಭಿನ್ನಭಾವವೆ, ಆ ಶರಣಂಗೆ–ಶಿವಶರಣಂಗೆ, ನಿತ್ಯನೇಮವೆ–ಆವಾಗಲು ತಪ್ಪದೆ ಮಾಡುವ ಕಟ್ಟಿನ ಕ್ರಿಯೆಗಳ, ಪೂಜೆಯಾಗಿಪ್ಪುದಯ್ಯಾ, ಇದೇ ಪೂರ್ಣ ಶರಣಭಾವ ; ಇದೇ ಪೂರ್ಣ–ತುಂಬಲ್ಪಟ್ಟ, ಶರಣನ–ಶಿವಶರಣನ, ಭಾವ–ಮನಸ್ಸು; ಅಲ್ಲಿಯ–ಆ ಲಿಂಗದಲ್ಲಿಯ ಲಿಂಗಸಿದ್ಧಿ ಘನಲಿಂಗ ಪದಸ್ಥಿತಿ ಲಿಂಗಪೂಜೆ: ಲಿಂಗ–ತ್ರಿವಿಧ ಲಿಂಗವು–ಸಾಧ್ಯತವು, ಘನಲಿಂಗಪದಮಹಾಲಿಂಗಪದ, ಸ್ಥಿತಿ–ಇರವಿಕೆಯು, ಲಿಂಗಪೂಜೆ–ಲಿಂಗಾರ್ಚನೆಯು, ಮತ್ತೆಲ್ಲಿಯ ನಿಶ್ಚಯಮದೆ ಪರಮಾರ್ಥ; ಮತ್ತೆ–ಮರಳಿ, ಅಲ್ಲಿಯೆ– ಆ ಲಿಂಗದಲ್ಲಿಯೆ; ನಿಶ್ಚಯವದೆ–ಯತಾರ್ಥವದೆ, ಪರಮಾರ್ಥಮಿದಲ್ಲದೆ–ಯತಾರ್ಥಮಲ್ಲದೆ, ಅನ್ಯಮಪ್ಪೆಲ್ಲವು–ಬೇರಾದವೆಲ್ಲವು, ಆತ್ಮದುಃಖ–ಆತ್ಮನ ವೇಧೆಯು, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ– ಸಂಪಾದಕರು– ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು– ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಪರಮಾಯುಷಿ ಸಿರಿಯೆ ಶಿವಸನ್ಮಂಗಳರೂಪಿಯೆ
ನೂರು ದಾಟಿದ ಪುಣ್ಯರೂಪಿಯೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿದ್ದೆ ಎಚ್ಚರಗಳಲಿ ಪೊರೆವ ಕೈಯಾಗಿರುವೆ
ವಾತ್ಸಲ್ಯ ವಾರಿಧಿಯಾಗಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬರದ ಕಾಲದೊಳಗೆ ಪೊರೆವೆ ಹಸಿದವರನ್ನು
ಕರೆಕರೆದು ಅನ್ನವ ನೀಡಿದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಾಚಿತಬ್ಬಿದೆ ಬಳಿಗೆ ಬಂದ ಮಕ್ಕಳನ್ನು
ಸಾಕಿ ಸಲಹಿದೆ ಬೆಳೆಸಿದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾರುಣ್ಯದ ಕಾಸಾರ ಕಾಯಕದ ಸಿರಿಸೂರ್ಯ
ದಾಸೋಹದ ದಯಶರಧಿ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎದೆಯ ಮೇಲಣ ಲಿಂಗ ಅಂಗೈಯ ಮೇಲಿಟ್ಟು
ಧ್ರುವಭಕ್ತಿಯಿಂದ ಮನವಿಟ್ಟರ್ಚಿಸೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬೆಳಗು ಬೈಗುಗಳಲ್ಲಿ ಎಡೆಬಿಡದೆ ಪೂಜಿಸು
ಗುರುಕೊಟ್ಟಲಿಂಗ ಮರೆಯಾದೆ ಎಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗೋಸಲ ಸಿದ್ಧೇಶ ವರಗುರು ಅಟವೀಶ
ಉದ್ದಾನಗುರುವರನ ಸ್ಮರಿಸುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯಕವೆ ಶಿವಪೂಜೆ ಕಾಯಕವೆ ಶಿವಯೋಗ
ಕಾಯಕವೆ ಕಾಯ್ವ ಕೈಲಾಸವೆನುತಿರುವ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದಾಸೋಹ ಕಲಿಸುದಕೆ ದಾಸೋಹಿ ನೀ ಬಂದೆ
ಈಶ ನೀನಾದ ದಾಸೋಹ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪ್ರೊ. ಹೆಚ್.ವಿ. ವೀರಭದ್ರಯ್ಯ



ಕ್ಷೇತ್ರವಾರ್ತೆ

# ಶ್ರೀಮಠದಲ್ಲಿ ನಡೆದಾಡುವ ದೇವರ ೧೧೪ನೇ ಜಯಂತೋತ್ಸವ

ಏಪ್ರಿಲ್ ೧, ಭಾರತದ ಆಧ್ಯಾತ್ಮಿಕ ಇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಡುವ ದಿನ. ಲಕ್ಷಾಂತರ ವಿದ್ಯಾರ್ಥಿಗಳು, ಭಕ್ತರು, ಅಭಿಮಾನಿಗಳ ಪಾಲಿಗೆ ಪವಿತ್ರವಾದ ದಿನ. ಲೋಕಕಲ್ಯಾಣಕ್ಕಾಗಿ ತೊಂಬತ್ತು ವರ್ಷಗಳ ಕಾಲ ತಮ್ಮ ಬದುಕನ್ನೇ ಮುಡಪಾಗಿಟ್ಟು ಬಡ ದೀನ ದಲಿತರ ಮಕ್ಕಳ ಭವಿಷ್ಯವನ್ನು ರೂಪಿಸಿದ ಮಹಾಶಿಲ್ಪಿಯಾಗಿ, ಗುರುವಾಗಿ, ಮಾರ್ಗದರ್ಶಕರಾಗಿ, ಮಮತೆಯ ಮಹಾಮಾತೆಯಾಗಿ, ನೊಂದ ಮನಸ್ಸಿಗೆ ಸ್ವಾಂತನ ನೀಡಿ ಅವರ ಬದುಕಿಗೆ ಭರವಸೆಯ ಬೆಳಕಾಗಿ, ಮಹಾಮಾನವತಾವಾದಿಯಾಗಿ, ಕರುಣೆಯ ಮಹಾಸಾಗರವಾಗಿ, ಹಸಿದು ಬಂದವರಿಗೆ ಹಸಿವನ್ನು ನೀಗಿಸುವ ಅನ್ನಪೂರ್ಣೇಶ್ವರಿಯಾಗಿ, ಲಕ್ಷಾಂತರ ಭಕ್ತರ ಆಶಾಜ್ಯೋತಿಯಾಗಿ ಈ ಶತಮಾನ ಕಂಡ ಮಹಾಸಂತ, ವೈರಾಗ್ಯದ ಉತ್ತುಂಗ ಶಿಖರ, ಜ್ಞಾನ–ದಾಸೋಹಗಳ ಮಹಾಸಂಗಮ, ವಾತ್ಸಲ್ಯಮೂರ್ತಿ, ಪದ್ಮಭೂಷಣ, ಕರ್ನಾಟಕ ರತ್ನ, ತ್ರಿವಿಧ ದಾಸೋಹಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಈ ಭೂಮಿಗೆ ಅವತರಿಸಿದ ಪುಣ್ಯದಿನ. ಪರಮಪೂಜ್ಯ



ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪುತ್ಥಳಿಯ ಭಕ್ತಿ ಮೆರವಣಿಗೆ

ಶ್ರೀಗಳವರ ಅನುಪಸ್ಥಿತಿಯಲ್ಲಿ ೧೧೪ನೇ ಜನ್ಮ ದಿನೋತ್ಸವವನ್ನು ಭಕ್ತಿ ಗೌರವದಿಂದ, ಸರಳವಾಗಿ ಆಚರಿಸಲಾಯಿತು. ಪೂಜ್ಯ ಶ್ರೀಗಳವರು ಭೌತಿಕವಾಗಿ ನಮ್ಮ ಕಣ್ಮುಂದೆ ಇಲ್ಲದೇ ಹೋದರೂ ಅವರು ಬಿತ್ತಿಹೋದ ಆದರ್ಶ ಮೌಲ್ಯಗಳಿಂದ ಪ್ರತಿಯೊಬ್ಬರ ಮನದಲ್ಲಿಯೂ ನೆಲೆಸಿದ್ದಾರೆ. ಪೂಜ್ಯರ ಕಾಯಕ-ದಾಸೋಹ ತತ್ತ್ವವನ್ನು ಜೀವನದಲ್ಲಿ ಅಳವಡಿಸಿಕೊಂಡು ಸಾಕಾರಗೊಳಿಸಿದರೆ ಅದೇ ನಾವು ಪೂಜ್ಯ ಶ್ರೀಗಳವರಿಗೆ ನೀಡುವ ಗೌರವ. ಪರಮಪೂಜ್ಯ ಶ್ರೀಗಳವರು ಬಿಟ್ಟು ಹೋದ ಮಾನವೀಯ ಮೌಲ್ಯಗಳಿಂದ ಜನರ ಹೃದಯದಲ್ಲಿ ವಿರಾಜಮಾನರಾಗಿ ನೆಲಸಿದ್ದಾರೆ.

ಈ ಸಲ ಕೋವಿಡ್ ಮಹಾಮಾರಿಯಿಂದ ಸರ್ಕಾರ ರೂಪಿಸಿದ ನಿಯಮಗಳಿಗನುಸಾರವಾಗಿ ಪರಮಪೂಜ್ಯರ ೧೧೪ನೇ ಜಯಂತೋತ್ಸವವನ್ನು ಸರಳವಾಗಿ, ಅರ್ಥಪೂರ್ಣವಾಗಿ ಆಚರಿಸಲಾಯಿತು. ವೇದಿಕೆಯ ಸಮಾರಂಭವಿಲ್ಲದೇ ಹೋದರೂ, ಭಕ್ತರು, ಅಭಿಮಾನಿಗಳು ಶ್ರೀಮಠಕ್ಕೆ ಭೇಟಿ ನೀಡಿ ಮುಂಜಾನೆಯಿಂದ ರಾತ್ರಿಯವರೆಗೂ ಪರಮಪೂಜ್ಯರ ಗದ್ದುಗೆಗೆ ಭಕ್ತಿಯಿಂದ ಪೂಜೆ ಸಲ್ಲಿಸಿ ಧನ್ಯತೆಯನ್ನು ಪಡೆದರು.

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಇಷ್ಟಲಿಂಗ ಪೂಜೆ ನೆರವೇರಿಸಿದ ನಂತರ ವಿವಿಧ ಮಠಗಳ ಹರಗುರು ಚರಮೂರ್ತಿಗಳ ಉಪಸ್ಥಿತಿಯಲ್ಲಿ ರುದ್ರಾಭಿಷೇಕ ಹಾಗೂ ಪೂಜಾಕೈಂಕರ್ಯವನ್ನು ನೆರವೇರಿಸಿದರು. ಈ ಸಂದರ್ಭದಲ್ಲಿ ತಮ್ಮ ಆರಾಧ್ಯ ದೈವ-ಗುರುಗಳನ್ನು ನೆನೆದು ಭಾವುಕರಾದರು. ವಿಶೇಷವಾಗಿ ಪುಷ್ಪಗಳಿಂದ ಅಲಂಕೃತವಾಗಿದ್ದ ಪೂಜ್ಯ ಶ್ರೀಗಳವರ ಗದ್ದುಗೆಗೆ ಪೂಜೆ ನೆರವೇರಿಸಿ ಆಶೀರ್ವಾದ ಪಡೆದರು.

ಗದ್ದುಗೆಗೆ ಪೂಜೆ ಸಲ್ಲಿಸಿದ ನಂತರ ಪರಮಪೂಜ್ಯರ ಪುತ್ಥಳಿಯನ್ನು ರುದ್ರಾಕ್ಷಿ ಮಂಟಪದಲ್ಲಿಟ್ಟು ಗದ್ದುಗೆಯಿಂದ ವಸ್ತುಪ್ರದರ್ಶನದ ಆವರಣದವರೆಗೂ ಮೆರವಣಿಗೆ ಮಾಡಲಾಯಿತು. ಮೆರವಣಿಗೆಯಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳು, ಶ್ರೀಮಠದ ವಿದ್ಯಾರ್ಥಿಗಳು, ವೀರಗಾಸೆ, ನಂದಿಧ್ವಜ, ಡೊಳ್ಳು ಕುಣಿತ ಮೊದಲಾದ ಜನಪದ ಕಲಾ ತಂಡಗಳೊಂದಿಗೆ ಮೆರವಣಿಗೆ ಮಾಡಲಾಯಿತು.



ಪರಮಪೂಜ್ಯರ ಜಯಂತೋತ್ಸವದ ಅಂಗವಾಗಿ ಬೆಂಗಳೂರಿನ ಶ್ರೀ ಶಿವಕುಮಾರ ಸ್ವಾಮೀಜಿ ಅನ್ನದಾನ ಸೇವಾ ಟ್ರಸ್ಟ್ ವತಿಯಿಂದ ೧೧೪ ಮಕ್ಕಳಿಗೆ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ 'ಶಿ' ಮೊದಲಕ್ಷರದ ನಾಮಕರಣ ಮಾಡಲಾಯಿತು. ಈ ಸಂದರ್ಭದಲ್ಲಿ ಮಂಡ್ಯ ಜಿಲ್ಲೆ ಪಾಂಡವಪುರದ ಪೂಜ್ಯ ಶ್ರೀ ಶ್ರೀ ತ್ರಿನೇತ್ರ ಮಹಂತ ಶಿವಯೋಗಿ ಸ್ವಾಮಿಗಳವರು, ಟ್ರಸ್ಟಿನ ಅಧ್ಯಕ್ಷ ಶ್ರೀ ಟಿ.ಎ. ರಾಜಶೇಖರ್ ಮೊದಲಾದವರು ಉಪಸ್ಥಿತರಿದ್ದರು.

ನಾಮಕರಣ ಸಮಾರಂಭದಲ್ಲಿ ಭಾಗವಹಿಸಿದ್ದ ೧೧೪ ಮಕ್ಕಳಿಗೂ ಉತ್ಕೃಷ್ಟ ಗುಣಮಟ್ಟದ ತೊಟ್ಟಿಲು,





ಬಟ್ಟೆ, ತೊಟ್ಟಿಲ ಹಾಸಿಗೆ, ದಿಂಬು, ಸೊಳ್ಳೆ ಪರದೆ ಉಚಿತವಾಗಿ ವಿತರಿಸಲಾಯಿತು. ಇವುಗಳ ಜತೆಯಲ್ಲಿ ಪರಮಪೂಜ್ಯರ ಭಾವಚಿತ್ರವನ್ನು ನೀಡಲಾಯಿತು.

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ನುಡಿ ಸಂದೇಶದಲ್ಲಿ "ಪೂಜ್ಯರ ಭಾವನಾತ್ಮಕವಾದ ಭಾವನೆಯ ಭಕ್ತಿಯೊಂದಿಗೆ ಕೋವಿಡ್ ಹಿನ್ನೆಲೆಯಲ್ಲಿ ಸರ್ಕಾರ ಜಾರಿಗೊಳಿಸಿರುವ ನಿಯಮಗಳಿಗೊಳಪಟ್ಟು ಪೂಜ್ಯರ ೧೧೪ನೇ ಜಯಂತೋತ್ಸವವನ್ನು ಯಾವುದೇ ಸಭೆ-ಸಮಾರಂಭಗಳಿಲ್ಲದೆ ಸರಳವಾಗಿ ಆಚರಿಸಿದ್ದೇವೆ. ಕಳೆದ ಎರಡು ವರ್ಷಗಳಿಂದ ಪೂಜ್ಯರ ಭೌತಿಕ ದರ್ಶನ ನಮಗೆ ಇಲ್ಲದಿದ್ದರೂ ಅವರ ಭಾವನಾತ್ಮಕವಾದ ಭಾವನೆಯ ಭಕ್ತಿಯೊಂದಿಗೆ ಸ್ಮರಣೆ ಮಾಡುವ ಮೂಲಕ ನಮ್ಮ ಬದುಕನ್ನು ಹಸನು ಮಾಡಿಕೊಳ್ಳೋಣ. ಶ್ರೀಗಳವರು ಎಂದೂ ವೈಯಕ್ತಿಕವಾಗಿ ಅದ್ದೂರಿ, ಆಡಂಬರದ ಆಚರಣೆ ಮಾಡಿಕೊಳ್ಳುವಂತವರೂ ಅಲ್ಲ. ಭಕ್ತರ ಒತ್ತಾಯದ ಮೇರೆಗೆ ಶ್ರೀಗಳ ಹುಟ್ಟುಹಬ್ಬ ಆಚರಣೆಯನ್ನು ಗುರುವಂದನಾ ಮಹೋತ್ಸವವನ್ನಾಗಿ ಆಚರಿಸಿಕೊಂಡು ಬರಲಾಗುತ್ತಿತ್ತು.

ಪೂಜ್ಯ ಶ್ರೀಗಳು ೧೧೧ ವರ್ಷಗಳ ಕಾಲ ತಮ್ಮ ಇಡೀ ಬದುಕನ್ನು ತಪೋಮಯವಾಗಿಸುವ ಜತೆಗೆ ಜ್ಯೋತಿಮಯವಾಗಿ ಬೆಳಗಿ ಲಕ್ಷಾಂತರ ಜನರ ಮನೆಯ ನಂದಾದೀಪವಾಗಿ ಬೆಳಗುತ್ತಿದ್ದಾರೆ. ಲೋಕೋದ್ಧಾರಕ್ಕಾಗಿ ಬದುಕು ಸೀಮಿತವಾಗಿಟ್ಟವರ ಬದುಕು ದೊಡ್ಡ ದಿಮ್ಮಿಯಾಗೇ ಇರುತ್ತದೆ. ಅದು ಎಲ್ಲೂ ಮುಳುಗುವುದಿಲ್ಲ. ಇದೇ ರೀತಿ ಶ್ರೀಗಳ ಬದುಕು ಸಹ ಇತ್ತು. ಶ್ರೀಗಳು ಯಾವುದೇ ರೀತಿಯ ಗೌರವಾಧಾರಗಳನ್ನು ಅಪೇಕ್ಷೆಪಟ್ಟವರಲ್ಲ. ವೈಯಕ್ತಿಕವಾಗಿ ಏನನ್ನು ಬಯಸದೆ ಸಮಾಜಕ್ಕಾಗಿ ದುಡಿದು ಬದುಕನ್ನು ಮುಡುಪಾಗಿಟ್ಟವರು. ಶೈಕ್ಷಣಿಕವಾಗಿ ಕ್ರಾಂತಿ ಮಾಡಿದ ಪೂಜ್ಯರು ಮಕ್ಕಳ ಬದುಕು ಹಸನು ಮಾಡಿದ್ದಾರೆ. ಸದಾ ಅವರು ಪ್ರಾತಃ ಸ್ಮರಣೀಯರಾಗಿದ್ದಾರೆ" ಎಂದು ಹೇಳಿದರು.

**ಗಣ್ಯರ ಭೇಟಿ :** ಜಿಲ್ಲಾ ಉಸ್ತುವಾರಿ ಸಚಿವ ಶ್ರೀ ಜೆ.ಸಿ. ಮಾಧುಸ್ವಾಮಿ, ಮಾಜಿ ಸಚಿವ ಶ್ರೀ ರಾಮಚಂದ್ರೇಗೌಡ, ಸಂಸದ ಶ್ರೀ ಜಿ.ಎಸ್. ಬಸವರಾಜು, ಶಾಸಕ ಶ್ರೀ ಜಿ.ಬಿ. ಜ್ಯೋತಿಗಣೇಶ್, ಶ್ರೀ ಮಸಾಲೆ ಜಯರಾಂ, ಜಿಲ್ಲಾಧಿಕಾರಿ ಶ್ರೀ ವೈ.ಎಸ್. ಪಾಟೀಲ್, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ



ಡಾ. ಕೆ. ವಂಶಿಕೃಷ್ಣ, ಅಪರ ಜಿಲ್ಲಾಧಿಕಾರಿ ಶ್ರೀ ಚನ್ನಬಸವಪ್ಪ, ಉಪವಿಭಾಗಾಧಿಕಾರಿ ಶ್ರೀ ಅಜಯ್, ತಹಶೀಲ್ದಾರ್ ಶ್ರೀ ಮೋಹನ್ ಸೇರಿದಂತೆ ಅನೇಕ ಗಣ್ಯರು ಪರಮಪೂಜ್ಯ ಶ್ರೀಗಳವರ ಗದ್ದುಗೆ ದರ್ಶನ ಮಾಡಿ ಪೂಜೆ ಸಲ್ಲಿಸಿ ಧನ್ಯತೆಯನ್ನು ಪಡೆದರು. ಪ್ರಸಿದ್ಧ ಚಿತ್ರನಟ ಶ್ರೀ ದುನಿಯಾ ವಿಜಯ್ ಗದ್ದುಗೆ ದರ್ಶನ ಪಡೆದು ನಂತರ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿ ಅವರನ್ನು ಭೇಟಿ ಮಾಡಿ ಆಶೀರ್ವಾದ ಪಡೆದರು.

**ಪ್ರಸಾದ ವ್ಯವಸ್ಥೆ :** ಶ್ರೀಮಠದಲ್ಲಿ ಯಾವುದೇ ಸಮಾರಂಭ ನಡೆಯಲಿ ಭಕ್ತರಿಗೆ ಯಾವುದೇ ರೀತಿಯ ತೊಂದರೆಯಾಗದಂತೆ ದಾಸೋಹ ವ್ಯವಸ್ಥೆ ಮಾಡಲಾಗುತ್ತಿದೆ. ದಾಸೋಹ ವ್ಯವಸ್ಥೆಯನ್ನು ಕಂಡೆ "ಸಿದ್ಧಗಂಗೆ



**ಪ್ರಸಾದ ವ್ಯವಸ್ಥೆಯನ್ನು ಪರಿಶೀಲಿಸುತ್ತಿರುವ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು**

ಊಟಕ್ಕೆ ಚೆಂದ, ಶಿವಗಂಗೆ ನೋಟಕ್ಕೆ ಚೆಂದ" ಎಂಬ ನಾಣ್ನುಡಿ ಬಳಕೆಗೆ ಬಂದಿದೆ. ಈ ಸಲ ಚಿತ್ರಾನ್ನ, ಪಾಯಸ, ಬೂಂದಿ, ಮೈಸೂರುಪಾಕ್, ಅನ್ನ, ಸಾಂಬಾರು, ಹೆಸರುಬೇಳೆ ಪಲ್ಯ, ಮಜ್ಜಿಗೆ ವ್ಯವಸ್ಥೆ ಮಾಡಲಾಗಿತ್ತು.

ವರದಿ

# ತುಮಕೂರಿನ ನಾಗರಿಕ ಸಮಿತಿ ವತಿಯಿಂದ ಪರಮಪೂಜ್ಯರ ೧೧೪ನೇ ಜನ್ಮದಿನಾಚರಣೆ

ಕಳೆದ ಅನೇಕ ವರ್ಷಗಳಿಂದ ತುಮಕೂರಿನ ನಾಗರಿಕ ಸಮಿತಿ ವತಿಯಿಂದ ಶ್ರದ್ಧಾ ಭಕ್ತಿಯಿಂದ ಪರಮಪೂಜ್ಯರ ಜಯಂತೋತ್ಸವವನ್ನು ಆಚರಿಸಿಕೊಂಡು ಬರುತ್ತಿದ್ದು, ಈ ವರ್ಷವೂ ಡಾ. ಗುಬ್ಬಿವೀರಣ್ಣ ಕಲಾ ಕ್ಷೇತ್ರದಲ್ಲಿ ಏರ್ಪಡಿಸಿದ್ದ ಸಮಾರಂಭದ ಸಾನ್ನಿಧ್ಯ ವಹಿಸಿದ್ದ ಸಾಣೇಹಳ್ಳಿ, ತರಳಬಾಳು ಶಾಖಾಮಠದ ಪೀಠಾಧ್ಯಕ್ಷರಾಧ ಪರಮಪೂಜ್ಯ ಶ್ರೀ ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರು ತಮ್ಮ ನುಡಿನಮನದಲ್ಲಿ "ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಬರೀ ಇತಿಹಾಸದ ವೈಭವವನ್ನು ಮೆಲುಕು ಹಾಕಿದವರಲ್ಲ, ಬದಲಾಗಿ ಅನ್ನದಾಸೋಹ, ಜ್ಞಾನ ದಾಸೋಹದ ಮೂಲಕ ಇತಿಹಾಸವನ್ನೇ ಸೃಷ್ಟಿಸಿದ ಮೇರು ಸಂತ. ಅವರಂತೆ ನಾವೆಲ್ಲರು ಬದುಕಿನಲ್ಲಿ ಕಾಯ ಮತ್ತು ಕಾಯಕ ಶುದ್ಧಿಯೊಂದಿಗೆ ಇತಿಹಾಸ ಸೃಷ್ಟಿಸುವಂತರಾಗಬೇಕು. ಸ್ವಾಮೀಜಿ ಅಂದರೆ ಸಮಾಜ ಸೇವಕ. ಸಮಾಜದ ಕಸವನ್ನು ಹೊಡೆದೊಡಿಸುವವನು. ಆದರೆ ಇಂದು ಅನೇಕ ಕಾವಿಧಾರಿಗಳು ಕಾಮನೆಗಳನ್ನು ಬೆಳೆಸಿಕೊಂಡು ಸಮಾಜ ಕಂಟಕರಾಗುತ್ತಿದ್ದಾರೆ. ಲಿಂಗೈಕ್ಯ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ಕಾವಿಯನ್ನು ಅಕ್ಷರಶಃ ಬೆಂಕಿಯೆಂದು ಭಾವಿಸಿ, ತಮ್ಮಲ್ಲಿನ ಅರಿಷಡ್ವರ್ಗಗಳನ್ನು ಮೆಟ್ಟಿ ನಿಂತು ಸಮಾಜಕ್ಕೆ ಪ್ರೀತಿ, ಸತ್ಯ, ಸಹಬಾಳ್ವೆಯ ಮೌಲ್ಯವನ್ನು ತೋರಿದ್ದಾರೆ. ಮಕ್ಕಳನ್ನು ಅಜ್ಞಾನದಿಂದ ಆದರ್ಶವಂತರಾಗಬೇಕೆಂದು ಇಂದಿನ ಧ್ಯೇಯವಾಗುವಂತೆ, ಅವರಂತೆ ಚರಿತ್ರಾರ್ಹ ಕೆಲಸ ಮಾಡುವುದೇ ನಾವು ಅವರಿಗೆ ಸಲ್ಲಿಸುವ ನಿಜವಾದ ಗೌರವ" ಎಂದು ಹೇಳಿದರು.

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಭಾವಚಿತ್ರಕ್ಕೆ ಹರಗುರು ಚರಮೂರ್ತಿಗಳು ಹಾಗೂ ಗಣ್ಯರಿಂದ ಪುಷ್ಪ ನಮನ



ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶಿಕ್ಷಣ ತಜ್ಞರಾದ ಡಾ. ಗುರುರಾಜ ಕರ್ಜಗಿ ಅವರು ಮಾತನಾಡಿ "ತಮ್ಮ ಕಾಯಕ ಸಾಧನೆಯ ಮೂಲಕ ನಡೆದಾಡುವ ದೇವರೆನಿಸಿದವರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು. ಅನ್ನ, ಜ್ಞಾನವನ್ನು ಮಿಳಿತಗೊಳಿಸಿ ಮೌಲ್ಯವನ್ನು ಮಕ್ಕಳಲ್ಲಿ ಬೆಳೆಸಿದ ಶ್ರೀಗಳವರ ಕಾರ್ಯ ಅದ್ಭುತವಾದುದು. ಹಸಿದವರಿಗೆ ವೇದಾಂತ ರುಚಿಸುವುದಿಲ್ಲವೆಂದು, ಮೊದಲು ಹಸಿದ ಹೊಟ್ಟೆಗೆ ಅನ್ನಹಾಕಿ, ನಂತರ ಬುದ್ಧಿವಾದ ಹೇಳುತ್ತಿದ್ದ ಶ್ರೀಗಳವರ ಸಿದ್ಧಾಂತ ಸಮಾಜದ ಉನ್ನತಿಗೆ ಮಾದರಿಯಾದುದು. ಸ್ವಾಮೀಜಿಗಳಾಗುವುದು, ಕಾವಿ ತೊಡುವುದು ಸುಲಭವಲ್ಲ, ಅದು ಅಂತರಂಗ ದಿಂದಲೇ ಪರಿಪಕ್ವವಾಗಿರಬೇಕು. ಇದಕ್ಕೆ ಶಿವಣ್ಣನವರು ಭವಭಂದವ ತೊರೆದು ಶ್ರೀಗಳಾಗಿದ್ದೇ ನಿದರ್ಶನ" ಎಂದರು.

ಪ್ರಾಸ್ತಾವಿಕ ನುಡಿಗಳನ್ನಾಡಿದ ಗಡಿ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರೂ, ತುಮಕೂರು ಜಿಲ್ಲಾ ಮಾಜಿ ಜಿಲ್ಲಾಧಿಕಾರಿಗಳೂ, ವಾಗ್ಮಿಗಳೂ ಆದ ಡಾ. ಸಿ. ಸೋಮಶೇಖರ್‌ರವರು ಮಾತನಾಡಿ "ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಸದಾ ಈ ನಾಡಿನ ರೈತರು, ಶ್ರಮಜೀವಿಗಳ ಬಗ್ಗೆ ಅಪಾರವಾದ ಕಾಳಜಿ, ಕಳಕಳಿ ಹೊಂದಿದ್ದರು. ಜಿಲ್ಲಾಧಿಕಾರಿಯಾಗಿ ಮಠಕ್ಕೆ ಭೇಟಿ ನೀಡಿದ ಪ್ರತಿ ಸಂದರ್ಭದಲ್ಲಿಯೂ ಯಾವ ಹಳ್ಳಿಗೆ ಹೋಗಿದ್ದೀರಿ, ರೈತರ ಸಮಸ್ಯೆ ಆಲಿಸಿದಿರಾ ಎಂದು ಪ್ರಶ್ನಿಸುತ್ತಿದ್ದರು. ಹಳ್ಳಿ ಹಳ್ಳಿ ತಿರುಗಿ ಜೋಳಿಗೆ ಹಿಡಿದು ಭಿಕ್ಷೆ ಬೇಡಿ ಮಠವನ್ನು ಈ ಎತ್ತರಕ್ಕೆ ಬೆಳೆಸಿದ್ದಾರೆ. ೮೦ ವರ್ಷಗಳ ದೀರ್ಘಕಾಲ ಮಠವನ್ನು ಮುನ್ನೆಡೆಸುವುದು ಸುಲಭದ ಮಾತಲ್ಲ. ಅವರ ಕರಕಮಲ ಸಂಜಾತರಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರು ಮಠವನ್ನು ಮುನ್ನಡೆಸಿಕೊಂಡು ಬರುತ್ತಿದ್ದಾರೆ. ಶ್ರೀಮಠದ ಹಳೆಯ ವಿದ್ಯಾರ್ಥಿಗಳೂ, ಪರಮಪೂಜ್ಯರ ಪರಮಭಕ್ತರೂ, ಪ್ರಜಾಪ್ರಗತಿ ಪತ್ರಿಕೆಯ ಸಂಪಾದಕರೂ ಆದ ಶ್ರೀ ಎಸ್. ನಾಗಣ್ಣ ಅವರ ನೇತೃತ್ವದ ಶ್ರೀಗಳವರ ಭಕ್ತ ವೃಂದದವರು ಪ್ರತೀವರ್ಷ ಅರ್ಥಪೂರ್ಣವಾಗಿ, ಯಶಸ್ವಿಯಾಗಿ ಪೂಜ್ಯರ ಗುರುವಂದನಾ ಕಾರ್ಯಕ್ರಮವನ್ನು ನಡೆಸಿಕೊಂಡು ಬರುತ್ತಿದ್ದಾರೆ" ಎಂದು ಪ್ರಶಂಸಿಸಿದರು.

ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಮಂಗಳ ನುಡಿಗಳಲ್ಲಿ "ಪೂಜ್ಯರು ಕಾಯನಿಷ್ಠೆ, ಕಾಯಕ ನಿಷ್ಠೆಯಿಂದಲೇ ೧೧೧ ವರ್ಷ ಸಾರ್ಥಕ ಜೀವನ ನಡೆಸಿದವರು. ೧೯೩೦ರ ದಶಕದಲ್ಲಿ ಸಿದ್ಧಗಂಗಾ ಮಠಕ್ಕೆ ಉತ್ತರಾಧಿಕಾರಿಯಾಗಿ ಬಂದ ಶ್ರೀಗಳು ಸಿದ್ಧಗಂಗಾ ಮಠವನ್ನು ತ್ರಿವಿಧ ದಾಸೋಹದ ಉನ್ನತ ಮಟ್ಟಕ್ಕೆ ಬೆಳೆಸಿದರು. ಈ ಮೂಲಕ ತುಮಕೂರನ್ನು ಇಡೀ ಜಗತ್ತಿಗೆ ಪರಿಚಯಿಸಿದ ಕೀರ್ತಿ ಪೂಜ್ಯರಿಗೆ ಸಲ್ಲುತ್ತದೆ. ಅನ್ನ, ವಿದ್ಯೆ ನೀಡುವ ಮೂಲಕ ಕೋಟ್ಯಾಂತರ ಜನರ ಬದಕನ್ನು ರೂಪಿಸಿದ ಮಹಾ ಸಂತರೆನಿಸಿದ್ದಾರೆ. ಅಂತಹ ಪುಣ್ಯಪುರುಷರ ಜನ್ಮದಿನವನ್ನು ಶ್ರೀಗಳು ಬದುಕಿದ್ದ ಸಂದರ್ಭದಿಂದಲೂ ಹಬ್ಬದಂತೆ ಎಸ್. ನಾಗಣ್ಣನವರ ನೇತೃತ್ವದಲ್ಲಿ ಸಮಿತಿಯವರು ನಡೆಸಿಕೊಂಡು ಬರುತ್ತಿದ್ದಾರೆ" ಎಂದು ತಿಳಿಸಿದರು.

ಬೇಲಿಮಠದ ಶಿವಾನುಭವ ಚರಮೂರ್ತಿ ಪೂಜ್ಯ ಶ್ರೀ ಶ್ರೀ ಶಿವರುದ್ರ ಸ್ವಾಮಿಗಳವರು ಪೂಜ್ಯರು ಸಮಾಜಕ್ಕೆ ಸಲ್ಲಿಸಿದ ಅನನ್ಯ ಕೊಡುಗೆಯನ್ನು ಮುಕ್ತಕಂಠದಿಂದ ಶ್ಲಾಘಿಸಿದರು. ಪ್ರಾರಂಭದಲ್ಲಿ ಶ್ರೀ ಎಸ್. ನಾಗಣ್ಣವರು ತಮ್ಮ ಸ್ವಾಗತ ನುಡಿಗಳಲ್ಲಿ ಪರಮಪೂಜ್ಯರನೊಡಗಿನ ಅವಿನಾಭಾವ ಸಂಬಂಧವನ್ನು ಸ್ಮರಿಸಿದರು. ವೇದಿಕೆಯಲ್ಲಿ ತುಮಕೂರು ನಗರದ ವೀರಶೈವ ಸಮಾಜದ ಅಧ್ಯಕ್ಷ ಶ್ರೀ ಟಿ.ಬಿ. ಶೇಖರ್, ನಾಗಸಂದ್ರದ ಶ್ರೀಗಳು, ಜಯಂತೋತ್ಸವ ಸಮಿತಿಯ ಡಾ. ಎಸ್. ಪರಮೇಶ್, ಶ್ರೀ ಧನಿಯಾಕುಮಾರ್, ಶ್ರೀ ಎಸ್.ಜಿ. ಚಂದ್ರಮೌಳಿ ಮೊದಲಾದ ಗಣ್ಯರು ಉಪಸ್ಥಿತರಿದ್ದರು. ಕಾರ್ಯಕ್ರಮವನ್ನು ಡಾ. ಶಾಲಿನಿ ಅವರು ನಿರೂಪಿಸಿದರು. ಶ್ರೀಮಠದ ಸತ್‌ಸಂಪ್ರದಾಯದಂತೆ ಸುಮಾರು ಎಂಟು ಸಾವಿರ ಜನರಿಗೆ ಪ್ರಸಾದ ವ್ಯವಸ್ಥೆ ಮಾಡಲಾಗಿತ್ತು. ಪ್ರಜಾಪ್ರಗತಿ ಪತ್ರಿಕೆಯಿಂದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೪ನೇ ಜನ್ಮದಿನದ ಪ್ರಯುಕ್ತ ವಿಶೇಷವಾಗಿ ಹೊರತಂದ 'ಜಗದ ಜಂಗಮ' ಸಂಚಿಕೆಯನ್ನು ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡಿದರು.

## ನಗರದ ವಿವಿಧೆಡೆಗಳಲ್ಲಿ ಜಯಂತೋತ್ಸವ

ನಗರದ ವಿವಿಧ ಸಂಘ ಸಂಸ್ಥೆಗಳು ಪರಮಪೂಜ್ಯರ ೧೧೪ನೇ ಜನ್ಮದಿನಾಚರಣೆಯನ್ನು ಭಕ್ತಿಯಿಂದ ಪೂಜ್ಯರ ಸ್ಮರಣೆ ಹಾಗೂ ದಾಸೋಹ ವ್ಯವಸ್ಥೆಯ ಮೂಲಕ ಆಚರಿಸಲಾಯಿತು. ಬಿ.ಎಚ್. ರಸ್ತೆಯ ಶ್ರೀ ವಿಘ್ನೇಶ್ವರ ಕಂಫರ್ಟ್ಸ್ ಮುಂಭಾಗ ಮುಂಜಾನೆ ಗೆಳೆಯರ ಬಳಗದ ವತಿಯಿಂದ ಪಾನಕ, ಹೆಸರುಬೇಳೆ, ಉಪ್ಪಿಟ್ಟು ಕೇಸರಿಬಾತ್ ವಿತರಿಸಲಾಯಿತು. ಈ ಸಂದರ್ಭದಲ್ಲಿ ರೆಡ್‌ಕ್ರಾಸ್ ರಾಜ್ಯ ಸಭಾಪತಿ ಶ್ರೀ ಎಸ್. ನಾಗಣ್ಣ, ಶ್ರೀ ಎಸ್.ಜಿ. ಚಂದ್ರಮೌಳಿ, ವೀರಶೈವ ಬ್ಯಾಂಕ್ ಉಪಾಧ್ಯಕ್ಷ ಶ್ರೀ ಮಲ್ಲಿಕಾರ್ಜುನಯ್ಯ, ಶ್ರೀ ಪಲ್ಲವಿ ನಾಗರಾಜು, ಶ್ರೀ ಧನಿಯಕುಮಾರ್, ಶ್ರೀ ಟಿ.ಆರ್. ಸದಾಶಿವಯ್ಯ ಮೊದಲಾದವರು ಉಪಸ್ಥಿತರಿದ್ದರು.

ವಾಲ್ಮೀಕಿ ನಾಗರಿಕ ಹಿತರಕ್ಷಣಾ ಸಮಿತಿಯಿಂದ ಏಳು ಕೊಪ್ಪರಿಗೆ ಬಸವಣ್ಣನ ದೇವಾಲಯದ ಆವರಣದಲ್ಲಿ ಆಚರಿಸಲಾಯಿತು. ಅರ್ಚಕ ಸಿದ್ಧಯ್ಯ ಶಾಸ್ತ್ರೀ ವಿಶೇಷ ಪೂಜೆ ನೆರವೇರಿಸಿದರು. ಟಿ.ಜಿ.ಎಂ.ಸಿ. ಬ್ಯಾಂಕ್ ಹಾಗೂ ಶ್ರೀ ಮಹಾಲಕ್ಷ್ಮೀ ದೇವಸ್ಥಾನದ ವತಿಯಿಂದ ಪೂಜ್ಯ ಶ್ರೀಗಳವರ ಪುತ್ಥಳಿಗೆ ವಿಶೇಷ ಪೂಜೆ ನೆರವೇರಿಸಿ ಭಕ್ತಾದಿಗಳಿಗೆ ಉಪಹಾರ ವಿತರಿಸಲಾಯಿತು.

ಹೊರಪೇಟೆಯ ಸರ್ಕಲ್‌ನಲ್ಲಿ ಶ್ರೀರಾಮ ಕನ್ನಡ ಯುವಕ ಸಂಘದಿಂದ ಪೂಜ್ಯರ ಜಯಂತೋತ್ಸವವನ್ನು ಆಚರಿಸಿ ದಾಸೋಹ ವಿತರಿಸಲಾಯಿತು. ಈ ಸಂದರ್ಭದಲ್ಲಿ ನಗರಪಾಲಿಕೆ ಮಾಜಿ ಸದಸ್ಯ ಶ್ರೀ ಟಿ.ಎಚ್. ಬಾಲಕೃಷ್ಣ, ಎಚ್.ಎಂ.ಟಿ. ರವಿ, ಶ್ರೀ ಹನುಮಂತರಾಯಪ್ಪ ಮೊದಲಾದವರು ಉಪಸ್ಥಿತರಿದ್ದರು.

ತುಮಕೂರು ನಗರದ ೧೪ನೇ ವಾರ್ಡಿನ ವಿನಾಯಕ ನಗರದಲ್ಲಿ ಅಲ್ಪಸಂಖ್ಯಾತ ಸಮುದಾಯ ದವರು ಜತೆಗೂಡಿ ಪೂಜ್ಯ ಶ್ರೀ ಶ್ರೀಗಳವರ ಜಯಂತೋತ್ಸವ ಆಚರಿಸಿದರು. ಈ ಸಂದರ್ಭದಲ್ಲಿ ಮುಖಂಡರಾದ ಶ್ರೀಯುತರಾದ ಮಹಮದ್ ಜಿಯಾವುಲ್ಲಾ, ಸುಹಾಸ, ಕಿರಣ್, ರೋಹಿತ್, ಮೋಹನ್, ಉಲ್ಲಾಸ್ ಮೊದಲಾದವರು ಉಪಸ್ಥಿತರಿದ್ದರು.

ರೈಲ್ವೆ ಗೇಟಿನ ಮುಂಭಾಗದಲ್ಲಿರುವ ಗುರು ಟವರ್‌ನ ಆವರಣದಲ್ಲಿ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ನಾಗರಿಕ ಸೇವಾ ಸಮಿತಿಯಿಂದ ಜಯಂತೋತ್ಸವವನ್ನು ಆಚರಿಸಲಾಯಿತು. ಈ ಸಂದರ್ಭದಲ್ಲಿ ತುಮಕೂರು ನಗರ ಶಾಸಕರಾದ ಶ್ರೀ ಜಿ.ಬಿ. ಜ್ಯೋತಿಗಣೇಶ್, ಸೇವಾ ಸಮಿತಿಯ ಶ್ರೀಯುತರಾದ ಗುರುನಂಜಪ್ಪ, ಶಿವಕುಮಾರ್, ಹೆಚ್.ಎಸ್. ಧರ್ಮಪಾಲ್, ರುದ್ರೇಶ್, ಶಂಕರ್, ಲಕ್ಷ್ಮೀಕಾಂತ, ಸಿದ್ಧರಾಜು ಗೌಡ, ಉಪ್ಪಾರಹಳ್ಳಿ ಕುಮಾರ, ನಾಗರಾಜ, ಲೋಕೇಶ್ ಮೊದಲಾದವರು ಉಪಸ್ಥಿತರಿದ್ದರು.

ನಗರದ ಅಗಳಿಕೋಟೆಯಲ್ಲಿರುವ ಶ್ರೀ ಸಿದ್ಧಾರ್ಥ ವೈದ್ಯಕೀಯ ಕಾಲೇಜಿನಲ್ಲಿ ನಡೆದಾಡುವ ದೇವರು, ತ್ರಿವಿಧ ದಾಸೋಹಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೪ನೇ ಜನ್ಮದಿನಾಚರಣೆಯನ್ನು ಪರಮಪೂಜ್ಯ ಶ್ರೀಗಳವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸುವ ಮೂಲಕ ಆಚರಿಸಲಾಯಿತು.

ಈ ಸಂದರ್ಭದಲ್ಲಿ ನುಡಿನಮನ ಸಲ್ಲಿಸಿದ ಮಾಜಿ ಉಪ ಮುಖ್ಯಮಂತ್ರಿ ಡಾ. ಜಿ. ಪರಮೇಶ್ವರ ಅವರು 'ಜಾತ್ಯಾತೀತವಾಗಿ ನಾಡಿನ ಬಡ ಸಮುದಾಯಕ್ಕೆ ವಸತಿ, ಊಟ, ಶಿಕ್ಷಣ ಕಲ್ಪಿಸಿದ ಮಹಾತಪಸ್ವಿ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ವಿಚಾರ ಧಾರೆಗಳು ಹಾಗೂ ಶ್ರೀಗಳವರ ಕಾಯಕ ಇಂದಿನ ದಿನಗಳಲ್ಲಿ ಅನುಕರಣೀಯ. ಭಕ್ತರ ಪಾಲಿನ ದೇವರಾಗಿರುವ ಪೂಜ್ಯ ಶ್ರೀಗಳು ಸದಾಕಾಲ ತಳ ಸಮುದಾಯದಲ್ಲಿ ಶಿಕ್ಷಣ ಕ್ರಾಂತಿಯನ್ನುಂಟು ಮಾಡಬೇಕೆಂಬ ಹೆಬ್ಬಯಕೆ ಹೊಂದಿದ್ದರು. ಬಡವರು, ಹಿಂದುಳಿದವರು, ದಲಿತರು ಯಾರೇ ಆಗಿರಲಿ ಮೊದಲು ಶಿಕ್ಷಣ ಪಡೆಯಬೇಕು. ಅದಕ್ಕಾಗಿ ಶ್ರೀಮಠದಲ್ಲಿ ಅನ್ನ, ಅಕ್ಷರ, ಆಶ್ರಯ ನೀಡಿ ತ್ರಿವಿಧ ದಾಸೋಹಿಗಳಾಗಿ ಶಿಕ್ಷಣ ಕ್ರಾಂತಿ ಮಾಡಿದರು. ಅವರ ಆಶಯದ ಫಲವಾಗಿ ಇಂದು ಜಿಲ್ಲೆಯಲ್ಲಿ ತಲೆ ಎತ್ತಿರುವ ಶಿಕ್ಷಣ ಸಂಸ್ಥೆಗಳೆ ಸಾಕ್ಷಿ" ಎಂದು ಪೂಜ್ಯ ಶ್ರೀಗಳವರ ಸಾಮಾಜಿಕ ಕಳಕಳಿಯನ್ನು ಸ್ಮರಿಸಿದರು. ಈ ಸಂದರ್ಭದಲ್ಲಿ ಶ್ರೀ ಸಿದ್ಧಾರ್ಥ ವೈದ್ಯಕೀಯ ಮತ್ತು ಆಸ್ಪತ್ರೆಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಡಾ. ಪಿ.ಕೆ. ದೇವದಾಸ, ಸಾಹೇ ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಡಾ. ಎಂ. ಝಡ್. ಕುರಿಯನ್, ಕಾಲೇಜಿನ ಉಪ ಪ್ರಾಚಾರ್ಯ ಡಾ. ಪ್ರಭಾಕರ್ ಮೊದಲಾದವರು ಉಪಸ್ಥಿತರಿದ್ದರು.



ಪಿ.ಬಿ. ರಸ್ತೆಯಲ್ಲಿರುವ ಶ್ರೀ ಸಿದ್ಧಗಂಗಾ ಪದವಿ ಪೂರ್ವ ಕಾಲೇಜಿನಲ್ಲಿ ಪೂಜ್ಯರ ಜನ್ಮದಿನಾಚರಣೆಯನ್ನು ಶ್ರದ್ಧಾ ಭಕ್ತಿಯಿಂದ ಆಚರಿಸಲಾಯಿತು. ಈ ಸಂದರ್ಭದಲ್ಲಿ ಪ್ರಾಚಾರ್ಯರು, ಉಪನ್ಯಾಸಕರು ಹಾಗೂ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು. ತುಮಕೂರು ನಗರದ ವಿವಿಧ ಬಡಾವಣೆಗಳಲ್ಲಿ ಪೂಜ್ಯರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸುವುದರ ಮೂಲಕ ಆಚರಿಸಲಾಯಿತು.

ತುಮಕೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಹಾಗೂ ಪರಂಜ್ಯೋತಿ ಸಂಯೋಗ ಸೇವಾ ಮಂಟಪ, ಶಾಂತಿನಗರ ಇವರ ಸಂಯುಕ್ತ ಆಶ್ರಯದಲ್ಲಿ ಪೂಜ್ಯ ಶ್ರೀ ಶ್ರೀಗಳವರ ಜಯಂತೋತ್ಸವವನ್ನು ಡಾ. ಪ್ರದೀಪಕುಮಾರ ಹೆಬ್ರಿ ಅವರು ಬರೆದ "ನಡೆದಾಡಿದ ದೇವರು" ಕೃತಿ ಲೋಕಾರ್ಪಣೆ ಮಾಡುವುದರ ಮೂಲಕ ಆಚರಿಸಲಾಯಿತು. ಕೃತಿಯನ್ನು ಮಂಡ್ಯ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಎಂ.ಎಸ್. ಶಿವಪ್ರಕಾಶ್ ಅವರು ಲೋಕಾರ್ಪಣೆ ಮಾಡಿದರು. ಕೃತಿಯನ್ನು ಕುರಿತು ತುಮಕೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಅಧ್ಯಕ್ಷ ಶ್ರೀ ಎಂ.ಜಿ. ಸಿದ್ಧರಾಮಯ್ಯ ಮಾತನಾಡಿದರು. ಈ ಸಂದರ್ಭದಲ್ಲಿ ಶ್ರೀ ಕೆ. ಹೊನ್ನಪ್ಪ, ಶ್ರೀಮತಿ ಮಹದೇವಮ್ಮ, ಶ್ರೀ ಹಂ.ಸಿ. ಕುಮಾರಸ್ವಾಮಿ, ಶ್ರೀ ಮಿಮಿಕ್ರಿ ಈಶ್ವರಯ್ಯ, ಶ್ರೀ ರಾಜಶೇಖರಯ್ಯ ಈಚನೂರು ಮೊದಲಾದವರು ಉಪಸ್ಥಿತರಿದ್ದರು.

## ಜಿಲ್ಲೆಯ ವಿವಿಧ ಕಡೆಗಳಲ್ಲಿ –

**ಹುಳಿಯೂರು** : ಹುಳಿಯೂರಿನ ರಾಂಗೋಪಾಲ್ ಸರ್ಕಲ್‌ನ ಮೆಡಿಕಲ್ ಚನ್ನಬಸವಯ್ಯ ಅವರ ಸೇವಾರ್ಥದಲ್ಲಿ ನಿರ್ಮಿಸಲಾಗಿದ್ದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪುತ್ಥಳಿಯನ್ನು ರಾಜ್ಯ ಜೈವಿಕ ಇಂಧನ ಅಭಿವೃದ್ಧಿ ಮಂಡಳಿ ಅಧ್ಯಕ್ಷ ಶ್ರೀ ಕೆ.ಎಸ್. ಕಿರಣ್‌ಕುಮಾರ್ ಅವರು ಲೋಕಾರ್ಪಣೆ ಮಾಡಿ ಮಾತನಾಡಿ "ಪೂಜ್ಯ ಶ್ರೀಗಳವರು ಜಾತಿ, ಧರ್ಮ ನೋಡದೆ ಬಡವರು ಎನ್ನುವ ಒಂದೇ ಮಾನದಂಡದಿಂದ ಲಕ್ಷಾಂತರ ಮಕ್ಕಳಿಗೆ ವಸತಿ, ವಿದ್ಯೆ, ಊಟ ನೀಡಿದ್ದಾರೆ. ಇವರು ಜಾತಿ, ಧರ್ಮವನ್ನು ಮೀರಿ ಬೆಳೆದ ಮಹಾಮಾನವತಾವಾದಿ. ಪೂಜ್ಯರ ನಿಸ್ವಾರ್ಥ ಸೇವೆ ಇಂದಿನ ಸ್ವಾರ್ಥ ಸಮಾಜಕ್ಕೆ ಮಾದರಿಯಾಗಿದೆ" ಎಂದು ಹೇಳಿದರು.

ಈ ಸಂದರ್ಭದಲ್ಲಿ ಹುಳಿಯೂರು ಪಿ.ಎಸ್.ಐ. ಶ್ರೀ ಕೆ.ಟಿ. ರಮೇಶ್, ಡಾ. ಚಂದ್ರಧರ ಹರಕೆರೆ, ಡಾ. ಲಕ್ಷ್ಮೀ, ಮೆಡಿಕಲ್ ಶ್ರೀ ಚನ್ನಬಸವಯ್ಯ, ಶ್ರೀ ಚಂದ್ರಣ್ಣ, ಶ್ರೀ ಲೋಕೇಶ್, ಶ್ರೀ ಗಂಗಣ್ಣ, ಶ್ರೀ ವಿಶ್ವಣ್ಣ ಮೊದಲಾದವರು ಉಪಸ್ಥಿತರಿದ್ದರು.

**ಶಿರಾ** : ಶಿರಾದ ಬಿಜೆಪಿ ಕಛೇರಿಯಲ್ಲಿ ಶಾಸಕ ಡಾ. ಸಿ.ಎಂ. ರಾಜೇಶ್‌ಗೌಡ ಅವರ ನೇತೃತ್ವದಲ್ಲಿ ಪರಮಪೂಜ್ಯರ ೧೧೪ನೇ ಜನ್ಮದಿನೋತ್ಸವವನ್ನು ಪೂಜ್ಯರ ಭಾವಚಿತ್ರಕ್ಕೆ ಪುಷ್ಪಾರ್ಚನೆ ಮಾಡುವುದರ ಮೂಲಕ ಆಚರಿಸಲಾಯಿತು. ಡಾ. ರಾಜೇಶ್‌ಗೌಡ ಅವರು ತಮ್ಮ ನುಡಿನಮನದಲ್ಲಿ "ಎಲ್ಲ ಧರ್ಮ, ಜಾತಿ ಸಮುದಾಯದ ಸುಮಾರು ಹತ್ತು ಸಾವಿರ ಮಕ್ಕಳಿಗೆ ವಿದ್ಯೆಯನ್ನು ಧಾರೆ ಎರೆದು ಉಚಿತ ಊಟ, ಶಿಕ್ಷಣ ಮತ್ತು ಆಶ್ರಯ ನೀಡಿ ಭಾರತದ ಭವ್ಯ ಪ್ರಜೆಗಳನ್ನಾಗಿ ರೂಪಿಸಿದ ಕೀರ್ತಿ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಸಲ್ಲುತ್ತದೆ. ಪರಮಪೂಜ್ಯರು ತಮ್ಮ ಜೀವಿತಾವಧಿ ಇರುವವರೆಗೂ ಸಮಾಜಕ್ಕೆ ನಿರಂತರವಾಗಿ ಸೇವೆ ಸಲ್ಲಿಸಿದ್ದಾರೆ. ನಮ್ಮ ಕರುನಾಡಿನ ನಡೆದಾಡುವ ದೇವರು ಎಂದೇ ಹೆಸರಾಗಿದ್ದ ಪೂಜ್ಯರ ಆದರ್ಶವನ್ನು ನಾವೆಲ್ಲರೂ ಪಾಲಿಸಬೇಕು" ಎಂದು ಹೇಳಿದರು. ಈ ಸಂದರ್ಭದಲ್ಲಿ ತೆಂಗು ಮತ್ತು ನಾರು ಅಭಿವೃದ್ಧಿ ನಿಗಮದ ಅಧ್ಯಕ್ಷ ಶ್ರೀ ಬಿ.ಕೆ. ಮಂಜುನಾಥ್, ಶಿರಾ ನಗರದ ಬಿಜೆಪಿ ಅಧ್ಯಕ್ಷ ಶ್ರೀ ವಿಜಯರಾಜ್, ಕೋಟೆ ರವಿ ಸೇರಿದಂತೆ ಅನೇಕ ಭಕ್ತರು ಉಪಸ್ಥಿತರಿದ್ದರು.

**ಗುಬ್ಬಿ** : ಗುಬ್ಬಿ ಪಟ್ಟಣದ ಹೊರವಲಯದ ಕೆ.ಜಿ. ಟೆಂಪಲ್ ರಸ್ತೆಯಲ್ಲಿರುವ ಶ್ರೀ ಸಿದ್ಧಿವಿನಾಯಕ ಪೆಟ್ರೋಲ್ ಬಂಕ್‌ನಲ್ಲಿ ತ್ರಿವಿಧ ದಾಸೋಹಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೪ನೇ ಜನ್ಮದಿನೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸಲಾಯಿತು.

ಈ ಸಂದರ್ಭದಲ್ಲಿ ಮಾತನಾಡಿದ ಶ್ರೀ ಸಿದ್ಧಿ ವಿನಾಯಕ ಪೆಟ್ರೋಲ್ ಬಂಕ್ ಮಾಲೀಕರಾದ ಶ್ರೀಮತಿ ಆರ್. ನಾಗರತ್ನ ಕೃಷ್ಣಕಾಂತ್ ಅವರು "ಪ್ರತಿ ವರ್ಷವೂ ನಿರಂತರವಾಗಿ ಶ್ರೀಗಳವರ ಜನ್ಮದಿನೋತ್ಸವವನ್ನು ಆಚರಿಸಿಕೊಂಡು ಬರಲಾಗುತ್ತಿದೆ. ಪೂಜ್ಯ ಶ್ರೀ ಶ್ರೀಗಳವರು

ಕಾಯಕ ಯೋಗಿಯಾಗಿದ್ದು ಅವರ ಕೊಡುಗೆ ಜಗತ್ತೇ ಬೆರಗುಗೊಳ್ಳುವಂತಹದ್ದು. ಬಡಮಕ್ಕಳಿಗೆ ಆಶ್ರಯ ನೀಡಿ, ಅವರ ಭವಿಷ್ಯವನ್ನು ರೂಪಿಸಿದ ಶ್ರೀಗಳವರ ಸೇವೆ ಮಹತ್ವಪೂರ್ಣವಾದುದು" ಎಂದು ಹೇಳಿದರು.

ಇಂಜನಿಯರ್ ಶ್ರೀ ಕೃಷ್ಣಕಾಂತ್ ಅವರು ಮಾತನಾಡಿ "ಸಿದ್ಧಗಂಗಾ ಶ್ರೀಗಳ ಮಹತ್ವದ ಸಾಧನೆ ವಿಶ್ವಕ್ಕೆ ಮಾದರಿಯಾಗಿದೆ" ಎಂದು ಪ್ರಶಂಸಿಸಿದರು.

ಭಕ್ತಿ ಸಮರ್ಪಣೆಯ ಕಾರ್ಯಕ್ರಮದ ಅಂಗವಾಗಿ ಸಾರ್ವಜನಿಕರಿಗೆ ಪಾನಕ, ಫಲಹಾರ ವ್ಯವಸ್ಥೆ ಮಾಡಲಾಗಿತ್ತು. ಕಾರ್ಯಕ್ರಮದಲ್ಲಿ ಸರ್ವಶ್ರೀ ವಿಶ್ವನಾಥ್, ಸೀತಾರಾಮ್, ಸೋಮಶೇಖರ್, ನರಸಿಂಹಮೂರ್ತಿ, ರಾಜಣ್ಣ, ಹೇಮಂತಕುಮಾರ್, ರಾಮಕೃಷ್ಣ ಮೊದಲಾದವರು ಉಪಸ್ಥಿತರಿದ್ದರು.

**ಮಧುಗಿರಿ :** ಮೌಂಟ್‌ವ್ಯೂ ಪಬ್ಲಿಕ್ ಶಾಲೆಯಲ್ಲಿ ಪೂಜ್ಯ ಶ್ರೀಗಳವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿ ಮಾತನಾಡಿದ ಶಾಲೆಯ ಕಾರ್ಯದರ್ಶಿ ಶ್ರೀ ಜಗದೀಶ್ ಅವರು "ಬಡ ಮಕ್ಕಳಿಗೆ ಅನ್ನದಾಸೋಹ, ವಿದ್ಯಾದಾನ ಮಾಡಿರುವ ತ್ರಿವಿಧ ದಾಸೋಹಿ ಪರಮಪೂಜ್ಯ ಶ್ರೀಗಳವರು ನಡೆದಾಡುವ ದೇವರು. ಅವರು ಅಪಾರವಾದ ಭಕ್ತರನ್ನು ಜಾತಿಭೇದವಿಲ್ಲದೆ ಸಂಪಾದಿಸಿದ್ದರು. ಲಕ್ಷಾಂತರ ಮಕ್ಕಳಿಗೆ ಅನ್ನ, ವಿದ್ಯೆ ಹಾಗೂ ಬದುಕಿಗೆ ಆಧಾರವಾಗಿದ್ದರು. ಇಂತಹ ಪುಣ್ಯಮೂರ್ತಿ ಎಂದಿಗೂ ನಮ್ಮನ್ನು ಅಗಲಿ ದೂರವಿರಲಾರರು. ಇಂದು ಅವರು ಹಾಕಿಕೊಟ್ಟ ಮಾರ್ಗದರ್ಶನದಲ್ಲಿ ಸಂಸ್ಥೆಯನ್ನು ನಡೆಸುತ್ತಿದ್ದು, ಸಾಧ್ಯವಾದಷ್ಟು ಬಡಮಕ್ಕಳಿಗೆ ವಿದ್ಯಾದಾನವನ್ನು ನೀಡಲಾಗುತ್ತಿದೆ. ಇಂತಹ ಯುಗಪುರುಷ, ಆದರ್ಶ ನಮಗೆಲ್ಲ ಮಾದರಿಯಾಗಲಿ, ಅವರ ದೇಹ ಇಹಲೋಕ ತ್ಯಜಿಸಿದರೂ ಅವರ ಅಂತರಾತ್ಮ ಸದಾ ನಮ್ಮ ಜೊತೆಗೆ ಇದೆ" ಎಂದು ಹೇಳಿದರು.

ಈ ಸಂದರ್ಭದಲ್ಲಿ ಶಾಲೆಯ ಸಂಸ್ಥಾಪಕ ಅಧ್ಯಕ್ಷ, ಶರಣ ಸಾಹಿತ್ಯ ಪರಿಷತ್ ತಾಲ್ಲೂಕು ಘಟಕದ ಅಧ್ಯಕ್ಷ ಶ್ರೀ ಸಿದ್ಧಲಿಂಗಪ್ಪ ಹಾಗೂ ಶಾಲೆಯ ಆಡಳಿತ ಮಂಡಳಿ, ಶಿಕ್ಷಕರು ಹಾಗೂ ವಿದ್ಯಾರ್ಥಿಗಳು ಉಪಸ್ಥಿತರಿದ್ದರು.

## ಸ್ಪಷ್ಟೀಕರಣ

ಸಿದ್ಧಗಂಗಾ 'ನವೆಂಬರ್-ಡಿಸೆಂಬರ್ ೨೦೨೦'ರ ಸಂಚಿಕೆಯಲ್ಲಿ ಡಾ. ಸಿ. ನಾಗಭೂಷಣ ಅವರು ಬರೆದ 'ಸ್ನೇಹಜೀವಿ ಶ್ರೀ ಜಿ.ಎನ್. ಸೋಮಶೇಖರ್' ಲೇಖನದಲ್ಲಿ ಅವರ ಅಂತ್ಯಕ್ರಿಯೆ ಶ್ರೀಮಠದ ರುದ್ರಭೂಮಿಯಲ್ಲಿ ನಡೆಯಿತು ಎಂದು ಪ್ರಕಟವಾಗಿದೆ. ಈ ಬಗ್ಗೆ ಶ್ರೀಮಠದ ಆಡಳಿತ ಮಂಡಳಿ ಸ್ಪಷ್ಟೀಕರಣ ನೀಡಿ ಶ್ರೀಮಠದ ಆವರಣದಲ್ಲಿ ಮಠಕ್ಕೆ ಸಂಬಂಧಿಸಿದ ರುದ್ರಭೂಮಿಯಿಲ್ಲವೆಂದು ತಿಳಿಸಿದ್ದಾರೆ. ಈ ವಿಚಾರವನ್ನು ಶ್ರೀಮಠದ ಭಕ್ತರಿಗೆ, ಅಭಿಮಾನಿಗಳ ಗಮನಕ್ಕೆ ತರಲಾಗಿದೆ.

– ಸಂ

## ಶ್ರೀವಾಣಿ

- ಬ್ರಹ್ಮಚರ್ಯ ರಕ್ಷಣೆ ಮಾಡದಿರುವುದರಿಂದ ಆಯುಸ್ಸು, ತೇಜಸ್ಸು ಶಕ್ತಿ ಪರಾಕ್ರಮ ಬುದ್ಧಿ, ಸಂಪತ್ತು, ಯಶಸ್ಸು, ಪುಣ್ಯ, ದೇವಾನುಗ್ರಹ ಎಲ್ಲವೂ ನಾಶವಾಗುತ್ತದೆ.
- ಮಾನವ ಆತ್ಮೋನ್ನತಿಯಾಗಬೇಕಾದರೆ ಧರ್ಮದ ತಳಹದಿಯಿಂದ ಮಾತ್ರ ಸಾಧ್ಯ.
- ಭರತಖಂಡ ಸರ್ವಧರ್ಮಗಳ ಸಮನ್ವಯದ ನೆಲೆವೀಡು. ಅದರಲ್ಲಿ ಕರ್ನಾಟಕವಂತೂ ಬೌದ್ಧ, ಜೈನ, ಶೈವ, ವೈಷ್ಣವ ಹೀಗೆ ಎಲ್ಲ ಧರ್ಮಗಳ ಸಂಗಮದ ಬೀಡು. ಈ ಕರ್ನಾಟಕದಲ್ಲಿ ಆಳಿದ ಮಹಾಪ್ರಭುಗಳು ಯಾವೊಂದು ಧರ್ಮವನ್ನು ಉಪೇಕ್ಷಿಸಿದವರಲ್ಲ. ಅವರು ಸರ್ವಧರ್ಮ ಸಹಿಷ್ಣುಗಳಾಗಿದ್ದರು. ಅವುಗಳ ರಕ್ಷಕರೂ ಆಗಿದ್ದರು.



ವರದಿ

# ರಾಜ್ಯದ ವಿವಿಧೆಡೆಗಳಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರ ೧೧೪ನೇ ಜಯಂತೋತ್ಸವ

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಭಕ್ತರು ನಾಡಿನಾದ್ಯಂತ ಲಕ್ಷಾಂತರ ಜನರಿದ್ದಾರೆ. ಕೊರೋನಾದಿಂದ ಆಯಾ ಜಿಲ್ಲೆಗಳಲ್ಲಿ, ಗ್ರಾಮಗಳಲ್ಲಿ ಪರಮಪೂಜ್ಯರ ಭಾವಚಿತ್ರಕ್ಕೆ ಭಕ್ತಿಯಿಂದ ಪೂಜೆ ಸಲ್ಲಿಸಿ ಮಠದ ಸತ್ಸಂಪ್ರದಾಯದಂತೆ ದಾಸೋಹ ವ್ಯವಸ್ಥೆಯನ್ನು ಮಾಡಲಾಗಿತ್ತು. ಸರಳವಾದ ಸಮಾರಂಭದಲ್ಲಿ ಗಣ್ಯರು ಭಾಗವಹಿಸಿ ಪೂಜ್ಯ ಶ್ರೀಗಳವರು ಈ ನಾಡಿಗೆ ಸಲ್ಲಿಸಿದ ಅಮೂಲ್ಯ ಸೇವೆಯನ್ನು ಸ್ಮರಿಸುವುದರ ಮೂಲಕ ಗುರುವಂದನೆ ಸಲ್ಲಿಸಲಾಯಿತು. ಅವುಗಳಲ್ಲಿ ಕೆಲವು ವರದಿಗಳನ್ನು ದಾಖಲೆ ದೃಷ್ಟಿಯಿಂದ ಪ್ರಕಟಿಸಲಾಗಿದೆ.

**ಬೆಂಗಳೂರು :** ಬೆಂಗಳೂರಿನಲ್ಲಿ ಸಚಿವರಾದ ಶ್ರೀ ವಿ. ಸೋಮಣ್ಣ ಪ್ರತಿಷ್ಠಾನ ವತಿಯಿಂದ ಜಯಂತ್ಯೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸಲಾಯಿತು. ಸಮಾರಂಭದಲ್ಲಿ ನುಡಿನಮನ ಸಲ್ಲಿಸಿದ ಶ್ರೀ ಸೋಮಣ್ಣನವರು "ಲಕ್ಷಾಂತರ ಮಕ್ಕಳ ಪಾಲಿಗೆ ಬೆಳಕಾದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ವಿಶ್ವ ಶ್ರೇಷ್ಠ ಸಂತರು. ಅವರ ಮಾರ್ಗದರ್ಶನದಿಂದಲೇ ರಾಜಕೀಯ ಕ್ಷೇತ್ರದಲ್ಲಿ ನಾನು ಯಶಸ್ವಿಯಾಗಲು ಸಾಧ್ಯವಾಯಿತು" ಎಂದು ನುಡಿದರು.

ಸಮಾರಂಭದ ದಿವ್ಯ ಸಾನ್ನಿಧ್ಯ ವಹಿಸಿದ್ದ ಶ್ರೀ ಕನಕಪುರ ದೇಗುಲಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಚನ್ನಬಸವ ಸ್ವಾಮಿಗಳವರು "ಬಡವರನ್ನು ಸಮಾಜದ ಮುಖ್ಯ ವಾಹಿನಿಗೆ ತರಲು ಶಿಕ್ಷಣ ದಾಸೋಹದ ಮೂಲಕ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಶಿಕ್ಷಣ ದಾಸೋಹದ ಮೂಲಕ ಬಹುದೊಡ್ಡ ಕ್ರಾಂತಿ ಮಾಡಿದರು. ನಿಸ್ವಾರ್ಥ ಸೇವೆಯಿಂದ ಜನರ ಮನಗೆದ್ದರು. ಅವರ ಜನ್ಮ ಜಯಂತಿಯನ್ನು 'ಸೇವಾ ದಿನವನ್ನಾಗಿ' ಆಚರಿಸಿದರೆ ಅರ್ಥಪೂರ್ಣವಾಗುತ್ತದೆ" ಎಂದು ಹೇಳಿದರು.

ಮಾಜಿ ಸಚಿವ ಶ್ರೀ ಬಿ.ಎಲ್. ಶಂಕರ್ ಅವರು ಮಾತನಾಡಿ "ಧಾರ್ಮಿಕ ಮತ್ತು ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ಹೇಗಿರಬೇಕು ಎಂಬುದನ್ನು ಇಡೀ ದೇಶಕ್ಕೆ ತೋರಿಸಿಕೊಟ್ಟವರು ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು. ಅವರು ರೈತರ ಸಮಸ್ಯೆಗಳ ಬಗ್ಗೆ ದನಿ ಎತ್ತುತ್ತಿದ್ದರು. ಪರಿಸರ, ಶಿಕ್ಷಣ ಹಾಗೂ ಸಾಮಾಜಿಕ ಸಮಸ್ಯೆಗಳ ಬಗ್ಗೆ ಸದಾ ಚಿಂತನೆ ಮಾಡುತ್ತಿದ್ದರು" ಎಂದು ಹೇಳಿದರು.



ಇದೇ ಸಂದರ್ಭದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ಸಾಧಕರನ್ನು ಗೌರವಿಸಲಾಯಿತು. ಈ ಸಂದರ್ಭದಲ್ಲಿ ಶ್ರೀಮತಿ ಶೈಲಜಾ ಸೋಮಣ್ಣ, ಹಿರಿಯ ನಟ ಶ್ರೀ ಶ್ರೀನಿವಾಸಮೂರ್ತಿ, ಡಾ. ನವೀನ್ ಸೋಮಣ್ಣ, ಪಾಲನೇತ್ರ ಮೊದಲಾದವರು ಉಪಸ್ಥಿತರಿದ್ದರು.

ಬೆಂಗಳೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಹಾಗೂ ಅಖಿಲ ಕರ್ನಾಟಕ ವೀರಶೈವ ಲಿಂಗಾಯತ ಸಮನ್ವಯ ವೇದಿಕೆ, ಶಿವಗಂಗೆ ಮೇಲಣಗವಿ ಮಠದ ಪೂಜ್ಯ ಶ್ರೀ ಶ್ರೀ





ಮಲಯ ಶಾಂತಮುನಿ ಶಿವಾಚಾರ್ಯ ಸ್ವಾಮೀಜಿಯವರು ಸಾನ್ನಿಧ್ಯದಲ್ಲಿ ಹಿರಿಯ ಜಾನಪದ ವಿದ್ವಾಂಸರೂ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಆದ ಡಾ. ಗೊ.ರು. ಚನ್ನಬಸಪ್ಪ ಅವರು ಕಾರ್ಯಕ್ರಮವನ್ನು ಉದ್ಘಾಟಿಸಿದರು.

ಸಾನ್ನಿಧ್ಯ ವಹಿಸಿದ್ದ ಪೂಜ್ಯ ಶ್ರೀ ಶ್ರೀ ಮಲಯ ಶಾಂತಮುನಿ ಶಿವಾಚಾರ್ಯ ಸ್ವಾಮೀಜಿಯವರು




“ಗ್ರಾಮೀಣ ಪ್ರದೇಶದ ಬಡ ಮಕ್ಕಳಿಗೆ ವಿದ್ಯೆ, ಸಂಸ್ಕಾರ, ಮಾನವೀಯ ಮೌಲ್ಯ, ಅನ್ನ ದಾಸೋಹ ನೀಡುವ ಮೂಲಕ ಬಲಿಷ್ಠ ವ್ಯಕ್ತಿಗಳನ್ನಾಗಿ ಮಾಡಿದ ಕೀರ್ತಿ ಕರ್ನಾಟಕ ರತ್ನ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರಿಗೆ ಸಲ್ಲುತ್ತದೆ. ಮಕ್ಕಳಿಗೆ ಅಕ್ಷರ ಬೆಳಕನ್ನು ನೀಡುವುದೇ ದೇವರಿಗೆ ನಾವು ಸಲ್ಲಿಸುವ ನೈವೇದ್ಯ ಎಂದು ಪೂಜ್ಯ ಶ್ರೀಗಳವರು ನಂಬಿದ್ದರು. ಅದೇ ಅಭಿಮತವನ್ನು ನಾವು ಜೀವನದಲ್ಲಿ ಅಳವಡಿಸಿಕೊಳ್ಳಬೇಕು” ಎಂದು ಕರೆ ನೀಡಿದರು.

ಕಾರ್ಯಕ್ರಮವನ್ನು ಉದ್ಘಾಟಿಸಿದ ಡಾ. ಗೊ.ರು. ಚನ್ನಬಸಪ್ಪನವರು ಮಾತನಾಡಿ “ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮಾನವೀಯತೆಯ ಸಾಕಾರಮೂರ್ತಿಯಾಗಿದ್ದರು. ರಾಷ್ಟ್ರದಲ್ಲಿ ಕ್ರೌರ್ಯ, ದೌರ್ಜನ್ಯ, ಅಸೂಯೆ, ಅಧಿಕಾರಕ್ಕಾಗಿ ದಬ್ಬಾಳಿಕೆ, ಬಡವರ ಮೇಲೆ ದೌರ್ಜನ್ಯ ನಡೆಯುತ್ತಿರುವ ಸಂದರ್ಭದಲ್ಲಿ ಮಾನವೀಯತೆ, ಸಂಸ್ಕಾರ, ಪರಂಪರೆ, ಅನ್ಯಾಯದ ವಿರುದ್ಧ ಧ್ವನಿ ಎತ್ತುವವರು ಬೇಕಾಗಿದ್ದಾರೆ. ಗಾಂಧಿ, ಬಸವ, ಕುವೆಂಪು, ಅಂಬೇಡ್ಕರ್, ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಅವರ ಹಾದಿಯಲ್ಲಿ ನಡೆಯುವ ಶರಣರು ಮುಂದೆ ಬರಬೇಕಾಗಿದೆ” ಎಂದರು.

ಇದೇ ಸಂದರ್ಭದಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಮಾಜಿ ಅಧ್ಯಕ್ಷರೂ, ಹಿರಿಯ ನಟರೂ, ಶ್ರೀಮಠದ ಹಳೆಯ ವಿದ್ಯಾರ್ಥಿಗಳೂ ಆದ ಶ್ರೀ ಮುಖ್ಯಮಂತ್ರಿ ಚಂದ್ರು ಅವರಿಗೆ '**ಸಿದ್ಧಗಂಗಾ ಸಿರಿ**' ಪ್ರಶಸ್ತಿಯನ್ನು ಪ್ರದಾನ ಮಾಡಲಾಯಿತು. ಸಮಾರಂಭದ ಅಂಗವಾಗಿ ವಚನಗಾಯನ, ವಚನ ನೃತ್ಯ ಕಾರ್ಯಕ್ರಮಗಳು ನಡೆದವು. ವೇದಿಕೆಯಲ್ಲಿ ಬೆಂಗಳೂರು ನಗರ ಜಿಲ್ಲಾ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಕೆ.ವಿ. ನಾಗರಾಜಮೂರ್ತಿ, ನಿತ್ಯ ದಾಸೋಹ ಸಮಿತಿ ಅಧ್ಯಕ್ಷ ಶ್ರೀ ಎಸ್. ಶಾಂತರಾಜು, ಶ್ರೀ ಆರ್. ಚನ್ನಕೇಶವಮೂರ್ತಿ, ಶ್ರೀ ಸಿ.ರಾ. ಹೊನ್ನಲಿಂಗಯ್ಯ, ಶ್ರೀಮತಿ ಮುಕ್ತಕಾಗಲಿ ಮೊದಲಾದವರು ಉಪಸ್ಥಿತರಿದ್ದರು.

ಯಶವಂತಪುರ ವಿಧಾನಸಭಾ ಕ್ಷೇತ್ರದ ಉಲ್ಲಾಳು ವಾರ್ಡ್‌ನ ನಾಗದೇವನಹಳ್ಳಿಯ ಕಲ್ಯಾಣ ಬಡಾವಣೆಯಲ್ಲಿ ಜನಹಿತ ಸೇವಾ ಸಂಘ ಏರ್ಪಡಿಸಿದ್ದ ಪೂಜ್ಯರ ಜಯಂತೋತ್ಸವ ಅಂಗವಾಗಿ ಏರ್ಪಡಿಸಿದ್ದ ಅನ್ನ ದಾಸೋಹವನ್ನು ಕನ್ನಲ್ಲಿ ಮಹಾಂತರ ಮಠಾಧ್ಯಕ್ಷ ಪೂಜ್ಯ ಶ್ರೀ ಶ್ರೀ ರೇಣುಕ ಶಿವಾಚಾರ್ಯ ಸ್ವಾಮೀಜಿ ಅವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಬಿಜೆಪಿ ಮುಖಂಡರಾದ ಶ್ರೀ ಜಿ. ಮುನಿರಾಜು, ಅನಿಲ್‌ಕುಮಾರ್, ಕೆ.ಆರ್. ಶಶಿಕುಮಾರ್ ಮೊದಲಾದವರು ಉಪಸ್ಥಿತರಿದ್ದರು.

**ಮಂಡ್ಯ** : ತ್ರಿವಿಧ ದಾಸೋಹಿ, ಆಧ್ಯಾತ್ಮದ ಮಹಾಬೆಳಗು, ವಿಶ್ವರತ್ನ, ವಿಶ್ವಸಂತ, ಮಹಾಶಿವಯೋಗಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿ







ಗಳವರ ೧೧೪ನೇ ಜನ್ಮ ಜಯಂತೋತ್ಸವವನ್ನು ಮಂಡ್ಯ ನಗರದಲ್ಲಿ ಶ್ರೀ ಎಂ. ಶಿವಕುಮಾರ ಅವರ ನೇತೃತ್ವದಲ್ಲಿ ಅರ್ಥಪೂರ್ಣವಾಗಿ ಆಚರಿಸಲಾಯಿತು. ಇದೇ ಸಂದರ್ಭದಲ್ಲಿ ಕಾಯಕಯೋಗಿ ಫೌಂಡೇಶನ್ ದಶಮಾನೋತ್ಸವ ಹಾಗೂ ಮಹಾದಾಸೋಹ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು.

ನಗರದ ಸ್ವರ್ಣಸಂದ್ರ ಬಡಾವಣೆಯಲ್ಲಿರುವ ಶ್ರೀ ಶಿವಕುಮಾರ ಸ್ವಾಮೀಜಿ ಉದ್ಯಾನದಲ್ಲಿ ನಡೆದ ಕಾರ್ಯಕ್ರಮದ ದಿವ್ಯ ಸಾನ್ನಿಧ್ಯವನ್ನು ವಹಿಸಿದ್ದ ಶ್ರೀಕ್ಷೇತ್ರ ತೆಂಡೇಕೆರೆಯ ಬಾಳೆಹೊನ್ನೂರು ಶಾಖಾಮಠದ ಪೂಜ್ಯ ಶ್ರೀ ಶ್ರೀ ಶಿವಚಾರ್ಯ ಸ್ವಾಮೀಜಿಯವರು ಮಾತನಾಡಿ “ಭರತ ಭೂಮಿಯ ಭಾಗ್ಯವಿಧಾತ ಎಂದೇ ಜನಮನದಲ್ಲಿ ನೆಲೆಯಾಗಿರುವ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ನೀಡಿರುವ ದಾಸೋಹದ ಕೊಡುಗೆ ಸೂರ್ಯ ಚಂದ್ರರೂ ಇರುವವರೆಗೂ ಅಜರಾಮರವಾಗಿ ಇರುತ್ತದೆ. ಪೂಜ್ಯರು ಭೌತಿಕವಾಗಿ ನಮ್ಮ ಮುಂದೆ ಇಂದು ಇಲ್ಲದೇ ಹೋದರೂ ಅವರು ಲೋಕಕಲ್ಯಾಣಕ್ಕಾಗಿ ಮಾಡಿದ ಅನನ್ಯ ಸೇವೆಯ ಮೂಲಕ ಚಿರಂಜೀವಿಗಳಾಗಿದ್ದಾರೆ. ಪ್ರಾತಃ ಸ್ಮರಣೀಯರಾಗಿದ್ದಾರೆ” ಎಂದು ನುಡಿದರು.

ಜೆಡಿಎಸ್ ರಾಜ್ಯ ಕಾರ್ಯದರ್ಶಿ ಶ್ರೀ ಕೆ.ಕೆ. ರಾಧಾಕೃಷ್ಣ ಕೀಲಾರ ಮಾತನಾಡಿ “ಬಡಮಕ್ಕಳಿಗೆ ಅನ್ನ, ಅಕ್ಷರ, ಆಶ್ರಯ ನೀಡಿ ಬದುಕಿಗೆ ಬೆಳಕಾಗಿದ್ದ ತ್ರಿವಿಧ ದಾಸೋಹಿ ಪರಮಪೂಜ್ಯರ ಜನ್ಮದಿನಾಚರಣೆಯ ಅಂಗವಾಗಿ ಮಹಾದಾಸೋಹ ನಡೆಸುತ್ತಿರುವುದು ಶ್ರೀಗಳವರ ಆದರ್ಶವನ್ನು ಗೌರವಿಸಿದಂತಾಗಿದೆ. ಈ ಸಂದರ್ಭದಲ್ಲಿ ಆಚರಿಸುತ್ತಿರುವ ಕಾಯಕಯೋಗಿ ಫೌಂಡೇಶನ ದಶಮಾನೋತ್ಸವ ಆಚರಣೆ ಅರ್ಥಪೂರ್ಣವಾಗಿದೆ” ಎಂದು ನುಡಿದರು.

ಇದೇ ಸಂದರ್ಭದಲ್ಲಿ 'ಸಿದ್ಧಗಂಗಾಶ್ರೀ' ಗ್ರಂಥಾಲಯವನ್ನು ನಗರಸಭೆ ಅಧ್ಯಕ್ಷ ಶ್ರೀ ಎಚ್.ಎಸ್. ಮಂಜು ಅವರು ಲೋಕಾರ್ಪಣೆ ಮಾಡಿದರು. ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಸಾಧಕರಿಗೆ 'ಸಿದ್ಧಗಂಗಾಶ್ರೀ ದಾಸೋಹರತ್ನ' ಹಾಗೂ 'ಸಿದ್ಧಗಂಗಾಶ್ರೀ ಸೇವಾರತ್ನ' ಪುರಸ್ಕಾರ ನೀಡಿ ಗೌರವಿಸಲಾಯಿತು.

ಕಾಯಕಯೋಗಿ ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಎಂ. ಶಿವಕುಮಾರ ಅವರು ಕಾರ್ಯಕ್ರಮ ಹಾಗೂ ದಾಸೋಹ ವ್ಯವಸ್ಥೆಯ ಬಗ್ಗೆ ಫೋನ್ ಮೂಲಕ ಮಾತನಾಡುವಾಗ ಭಾವುಕರಾದರು. ಅವರು ಕೊರೋನಾದಿಂದ ಕಾರ್ಯಕ್ರಮಕ್ಕೆ ಹೆಚ್ಚು ಜನರನ್ನು ನಿರೀಕ್ಷೆ ಮಾಡಿರಲಿಲ್ಲ. ಹಾಗಾಗಿ ೨೦೦೦ ಜನರಿಗೆ ದಾಸೋಹ ವ್ಯವಸ್ಥೆಯನ್ನು ಮಾಡಿಕೊಂಡಿದ್ದರು. ನಮ್ಮ ನಿರೀಕ್ಷೆಗೂ ಮೀರಿ ಭಕ್ತರು, ಅಭಿಮಾನಿಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದರು. ದಾಸೋಹಕ್ಕೆ ಪಾಯಸ, ಚಿತ್ರಾನ್ನ, ಬೂಂದಿ, ಅನ್ನಸಾಂಬಾರು, ಪಲ್ಯ, ಕೋಸಂಬರಿ, ಮಜ್ಜಿಗೆ ಮಾಡಿಸಲಾಗಿತ್ತು. ೪೦೦೦ ಕ್ಕೂ ಹೆಚ್ಚು ಜನ ಬಂದಿದ್ದರಿಂದ ಏನು ಮಾಡಬೇಕೆಂದು ತೋಚಲಿಲ್ಲ. ಈ ಸಂದರ್ಭದಲ್ಲಿ ಪರಮಪೂಜ್ಯರನ್ನು ಮನಸ್ಸಿನಲ್ಲಿ ಭಕ್ತಿಯಿಂದ ಸ್ಮರಿಸಿಕೊಂಡೆವು. ಪರಮಪೂಜ್ಯ ಆಶೀರ್ವಾದದಿಂದ ಯಾವುದೇ ರೀತಿಯ ತೊಂದರೆ ಯಾಗದೆ ಅಷ್ಟು ಜನರೂ ಸಂತೋಷದಿಂದ ಪ್ರಸಾದ ಸ್ವೀಕರಿಸಿದರು. ಒಂದು ರೀತಿಯಲ್ಲಿ ಪವಾಡದಂತೆ ನಡೆದುಹೋಯಿತು. ಇದು ಪವಾಡವಲ್ಲವೇ” ಎಂದು ಹೇಳುವಾಗ ಅವರ ಮಾತುಗಳಲ್ಲಿ ಧನ್ಯತಾಭಾವನೆ ವ್ಯಕ್ತವಾಯಿತು. ಪೂಜ್ಯರ ಕರುಣೆ, ಆಶೀರ್ವಾದವಿದ್ದರೆ ಎಲ್ಲವೂ ಅಕ್ಷಯವಾಗುತ್ತದೆ ಎಂಬ ಮಾತು ನಿಜವೆನಿಸಿತು.

ಕಾರ್ಯಕ್ರಮದಲ್ಲಿ ಕಾರ್ಯದರ್ಶಿ ಶ್ರೀ ಅರುಣ ಜ್ಯೋತಿ, ಶ್ರೀ ಡಿ.ಬಿ. ಮಂಜುನಾಥ್, ನಗರಸಭೆ ಸದಸ್ಯೆ ಶ್ರೀಮತಿ ಕೆ. ವಿದ್ಯಾ, ಶ್ರೀ ವಿ.ಎಲ್. ಮಹದೇವಸ್ವಾಮಿ, ಶ್ರೀ ಮಹೇಂದ್ರ, ಶ್ರೀ ಪ್ರಫುಲ್ಲಚಂದ್ರ, ಶ್ರೀ ಎಲ್. ಸಂದೇಶ್, ಶ್ರೀ ಬಿ.ಎಂ. ಅಪ್ಪಾಜಪ್ಪ, ಶ್ರೀ ಅನಿಲ್‌ಕುಮಾರ್, ಶ್ರೀ ಪೋತೇರ ಮಹದೇವಪ್ಪ, ಅರಣ್ಯಾಧಿಕಾರಿ ಶ್ರೀ ಟಿ. ವೆಂಕಟೇಶ್ ಮೊದಲಾದವರು ಉಪಸ್ಥಿತರಿದ್ದರು.

**ನೆಲಮಂಗಲ** : ನೆಲಮಂಗಲದ ಪವಾಡ ಬಸವಣ್ಣ ದೇವರ ಮಠದಲ್ಲಿ ಪೂಜ್ಯರ ಜಯಂತೋತ್ಸವವನ್ನು ಶ್ರದ್ಧೆ, ಭಕ್ತಿ, ಗೌರವದಿಂದ ಆಚರಿಸಲಾಯಿತು. ಕಾರ್ಯಕ್ರಮದ ಸಾನ್ನಿಧ್ಯ ವಹಿಸಿದ್ದ ಪವಾಡ ಬಸವಣ್ಣ ದೇವರಮಠದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಮಾತನಾಡಿ “ಬಡಮಕ್ಕಳ ಶ್ರೇಯೋಭಿವೃದ್ಧಿಗಾಗಿ ತಮ್ಮ ಬದುಕನ್ನು ಮುಡುಪಾಗಿಟ್ಟಿದ್ದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮಹಾಮಾನವತಾ ವಾದಿ” ಎಂದು ನುಡಿದರು. ಪರಮಪೂಜ್ಯರ ಭಾವಚಿತ್ರಕ್ಕೆ ಭಕ್ತಿಯಿಂದ ಪೂಜೆ ಸಲ್ಲಿಸಲಾಯಿತು. ಈ ಸಂದರ್ಭದಲ್ಲಿ ಸಾವಿರಾರು ವಿದ್ಯಾರ್ಥಿಗಳು ಭಾಗವಹಿಸಿದ್ದರು.









ಪರಮಪೂಜ್ಯರ ಜಯಂತೋತ್ಸವದ ಅಂಗವಾಗಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮೀಜಿ ಅವರ ನೇತೃತ್ವದಲ್ಲಿ ಶ್ರೀ ಬಸವೇಶ್ವರ ಸಮೂಹ ಶಿಕ್ಷಣ ಸಂಸ್ಥೆ ವತಿಯಿಂದ ಸಾರ್ವಜನಿಕ ಆಸ್ಪತ್ರೆಯ ರೋಗಿಗಳಿಗೆ, ಬಾಣಂತಿ ಮಹಿಳೆಯರಿಗೆ ಹಣ್ಣುಗಳನ್ನು ಹಂಚಲಾಯಿತು. ಈ ಸಂದರ್ಭದಲ್ಲಿ ವನಕಲ್ಲು ಮಠದ ಪೂಜ್ಯ ಶ್ರೀ ಶ್ರೀ ಬಸವರಮಾನಂದ ಸ್ವಾಮಿಗಳು ಉಪಸ್ಥಿತರಿದ್ದರು. ಅಲ್ಲದೆ ನಗರದ ವಿವಿಧ ವಿದ್ಯಾ ಸಂಸ್ಥೆಗಳು, ವೀರಶೈವ, ಲಿಂಗಾಯತ ಸಂಘಟನೆಗಳು ಹಾಗೂ ತಾಲ್ಲೂಕಿನ ವಿವಿಧ ಕಡೆಗಳಲ್ಲಿ ಪೂಜ್ಯರ ಹುಟ್ಟುಹಬ್ಬವನ್ನು ಭಕ್ತಿಯಿಂದ ಆಚರಿಸಲಾಯಿತು.

ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕು ಬ್ಯಾಲಕೆರೆ ಗ್ರಾಮದಲ್ಲಿ ಪರಮಪೂಜ್ಯರ ಭಾವಚಿತ್ರವನ್ನು ರಥದಲ್ಲಿಟ್ಟು ಗ್ರಾಮದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡುವುದರ ಮೂಲಕ ಆಚರಿಸಲಾಯಿತು. ಈ



ಸಂದರ್ಭದಲ್ಲಿ ಪರಮಪೂಜ್ಯರು ಸಮಾಜಕ್ಕೆ ಸಲ್ಲಿಸಿದ ಅಮೂಲ್ಯ ಕೊಡುಗೆಯನ್ನು ಸ್ಮರಿಸಲಾಯಿತು.

ಕಾರ್ಯಕ್ರಮದ ನಂತರ ಪ್ರಸಾದ ವ್ಯವಸ್ಥೆ ಮಾಡಲಾಗಿತ್ತು.

**ಗುಲ್ಬರ್ಗಾ** : ನಗರದ ಪಿಡಿಎ ಇಂಜಿನಿಯರಿಂಗ್ ಕಾಲೇಜಿನ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಆರ್ಕಿಟೆಕ್ಟ್ ವಿಭಾಗದಲ್ಲಿ ಪೂಜ್ಯ ಶ್ರೀ ಶ್ರೀಗಳವರ ಜಯಂತೋತ್ಸವವನ್ನು ಭಕ್ತಿ ಭಾವದಿಂದ



ಆಚರಿಸಲಾಯಿತು. ಹೈದ್ರಾಬಾದ್ ಶಿಕ್ಷಣ ಸಂಸ್ಥೆಯ ಉಪಾಧ್ಯಕ್ಷ ಡಾ. ಶರಣಬಸಪ್ಪ ಹರವಾಳ, ಸದಸ್ಯರಾದ ಡಾ. ಎಸ್.ಬಿ. ಕಾಮರೆಡ್ಡಿ, ಬಸವರಾಜ ಖಂಡೇರಾವ, ಡಾ. ಮಹದೇವಪ್ಪ ರಾಂಪುರ, ಸಾಯಿನಾಥ ಪಾಟೀಲ, ವಿನಯ ಪಾಟೀಲ, ಡಾ. ಅನಿಲ ಮರಗೋಳ, ಪ್ರೊ. ಶಿವಕುಮಾರ ಬಂಡಿ ಮೊದಲಾದವರು ಭಾಗವಹಿಸಿದ್ದರು.

ಜಿಲ್ಲಾ ವೀರಶೈವ ಸಮಾಜ ಹಾಗೂ ಶ್ರೀ ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ವತಿಯಿಂದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜಯಂತೋತ್ಸವ ಸಾರಂಗಮಠ, ಶ್ರೀಶೈಲಂ, ಸುಲಫಲ ಮಠ, ಕಲಬುರಗಿಯ ಜಗದ್ಗುರು ಡಾ. ಶ್ರೀ ಶ್ರೀ ಸಾರಂಗಧರ ದೇಶಿಕೇಂದ್ರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು. ಸಮಾರಂಭವನ್ನು ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯದ ಪ್ರಭಾರಿ ಕುಲಪತಿಗಳಾದ ಡಾ. ಮಲ್ಲಿಕಾರ್ಜುನ ವಿ. ಅಳಗವಾಡಿ ಅವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ 'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ಡಾ. ಭೀಮಾಶಂಕರ ಸಿ. ಬಿಲಗುಂದಿ ಹಾಗೂ 'ಡಾ. ಶಿವಕುಮಾರಶ್ರೀ' ಪ್ರಶಸ್ತಿಯನ್ನು ಶ್ರೀ ಕಲ್ಯಾಣಪ್ಪ ಪಾಟೀಲ್ ಮಳಖೇಡ ಅವರಿಗೆ ಪ್ರದಾನ ಮಾಡಲಾಯಿತು. ಹೈದರಾಬಾದ್ ಕರ್ನಾಟಕ ವಾಣಿಜ್ಯೋತ್ಸವ ಹಾಗೂ ಕೈಗಾರಿಕಾ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಪ್ರಶಾಂತ ಎಸ್. ಮಾನಕಲ್ ಹಾಗೂ







ಸರ್ಕಾರಿ ನೌಕರರ ಗೃಹ ನಿರ್ಮಾಣ ಸಂಘದ ಅಧ್ಯಕ್ಷರಾದ ಶ್ರೀ ನಾಗಪ್ಪ ಹೊನ್ನಳ್ಳಿ ಅವರಿಗೆ ವಿಶೇಷ ಸನ್ಮಾನ ಮಾಡಿ ಗೌರವಿಸಲಾಯಿತು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿ ಸಂಘ ಮತ್ತು ಜಿಲ್ಲಾ ವೀರಶೈವ ಸಮಾಜದ ಅಧ್ಯಕ್ಷರಾದ ಶ್ರೀ ಅರುಣಕುಮಾರ್ ಎಸ್. ಪಾಟೀಲ್ ಕೂಡಲಹಂಗರಗಾ ಅವರು ವಹಿಸಿದ್ದರು. ಸಮಾರಂಭದಲ್ಲಿ ಶ್ರೀ ದೇವೇಂದ್ರಪ್ಪ ಆವಂಟಿ, ಶ್ರೀ ಚನ್ನಬಸವಯ್ಯ ಗುರುವಿನ, ಶ್ರೀಶೈಲ ಘೂಳೆ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ಸಾನ್ನಿಧ್ಯ ವಹಿಸಿದ್ದ ಜಗದ್ಗುರು ಡಾ. ಶ್ರೀ ಶ್ರೀ ಸಾರಂಗಧರ ದೇಶಿಕೇಂದ್ರ ಸ್ವಾಮೀಜಿಯವರು "ನಾಡಿನಲ್ಲಿ ಅತಿ ಹೆಚ್ಚು ಮಕ್ಕಳಿಗೆ ಶಿಕ್ಷಣ ಹಾಗೂ ಜ್ಞಾನದಾಸೋಹ ಕಲ್ಪಿಸಿರುವ ಸಿದ್ಧಗಂಗಾ ಮಠದ ಲಿಂಗೈಕ್ಯ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಭಾರತ ಸರ್ಕಾರ 'ಭಾರತರತ್ನ' ಪ್ರಶಸ್ತಿ ಕೊಡದಿದ್ದರೇನಂತೆ ವಿಶ್ವರತ್ನವೇ ಆಗಿದ್ದಾರೆ. ಅವರ ಸಂಸ್ಥೆಗಳಲ್ಲಿ ಕಲಿತವರು ವಿಶ್ವದ ಮೂಲೆ ಮೂಲೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಬಸವಣ್ಣನವರು ೧೨ನೇ ಶತಮಾನದಲ್ಲಿ ನಿತ್ಯ ೧.೯೬ ಲಕ್ಷ ಜನರಿಗೆ ದಾಸೋಹ ಮಾಡುತ್ತಿದ್ದರಂತೆ, ಹಾಗೆಯೇ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ನಿತ್ಯ ೧೦ ಸಾವಿರ ಮಕ್ಕಳಿಗೆ ಅಕ್ಷರ ದಾಸೋಹದ ಜೊತೆಗೆ ಅನ್ನದಾಸೋಹವನ್ನು ಮಾಡುತ್ತಿದ್ದರು. ಸದಾ ಅವರು ಬಸವಣ್ಣನವರ ತತ್ತ್ವ ಪರಿಪಾಲಕರಾಗಿದ್ದರು. ಅವರು ಆಧುನಿಕ ಬಸವಣ್ಣ" ಎಂದು ಪ್ರಶಂಸಿಸಿದರು.

ಶಹಾಬಾದ್‌ನಲ್ಲಿರುವ ರಾವೂರಿನ ಸಿದ್ಧಲಿಂಗೇಶ್ವರ ಮಠದಲ್ಲಿ ಕರ್ನಾಟಕ ವಚನ ಸಾಹಿತ್ಯ ಅಕಾಡೆಮಿ ವತಿಯಿಂದ ಪೂಜ್ಯ ಶ್ರೀಗಳವರ ಜನ್ಮದಿನೋತ್ಸವದ ಅಂಗವಾಗಿ ಬಡಮಕ್ಕಳಿಗೆ ನೋಟ್‌ಬುಕ್ ವಿತರಣೆ, ಜಾನಪದ ಕಲಾವಿದರಿಗೆ ಸನ್ಮಾನ ಮಾಡಲಾಯಿತು. ಕಾರ್ಯಕ್ರಮದ ಸಾನ್ನಿಧ್ಯ ವಹಿಸಿದ್ದ ಸಿದ್ಧಲಿಂಗೇಶ್ವರ ಸಂಸ್ಥಾನ ಮಠದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗದೇವರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಊರೂರು ತಿರುಗಿ ಭಿಕ್ಷೆ ಬೇಡಿ ಮಠ ಹಾಗೂ ಮಕ್ಕಳನ್ನು, ಭಕ್ತರನ್ನು ಸಲುಹಿದ ಮಹಾನ್ ಪುರುಷರು. ಯಾರು ಸಮಾಜಕ್ಕಾಗಿ ಸರ್ವಸ್ವವನ್ನೂ ತ್ಯಾಗ ಮಾಡುವರೋ ಅವರು ಎಲ್ಲರ ಮನಸ್ಸಿನಲ್ಲಿ ಅಜರಾಮರವಾಗಿ ಉಳಿಯುತ್ತಾರೆ ಎಂದು ಹೇಳಿದರು.

**ಬೀದರ್** : ಬೀದರ್‌ನ ಶಿವನಗರದ ಅಕ್ಕಮಹಾದೇವಿ ಕಲ್ಯಾಣ ಮಂಟಪದಲ್ಲಿ ಬೀದರ ಜಿಲ್ಲೆ ಸಿದ್ಧಗಂಗಾ ಹಳೆಯ ವಿದ್ಯಾರ್ಥಿ ಮತ್ತು ಹಿತೈಷಿ ಸಂಘದ ವತಿಯಿಂದ ಏರ್ಪಡಿಸಲಾಗಿದ್ದ ಪೂಜ್ಯರ ಜನ್ಮದಿನೋತ್ಸವ ಹಾಗೂ ಗುರುವಂದನಾ ಕಾರ್ಯಕ್ರಮ ಹಲಬರ್ಗಾದ ಪೂಜ್ಯ ಶ್ರೀ ಶ್ರೀ ಹಾವಲಿಂಗ ಶಿವಾಚಾರ್ಯರ ದಿವ್ಯಸಾನ್ನಿಧ್ಯದಲ್ಲಿ



ಏರ್ಪಡಿಸಲಾಗಿತ್ತು. ಕಾರ್ಯಕ್ರಮದಲ್ಲಿ ಬೀದರ ನಗರ ಪಿ.ಎಸ್.ಐ. ಶ್ರೀ ಸಂತೋಷ ಎಲ್.ಟಿ., ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಶ್ರೀ ಸುರೇಶ ಚನ್ನಶೆಟ್ಟಿ, ಪ್ರಜಾವಾಣಿ ಹಿರಿಯ ವರದಿಗಾರ ಶ್ರೀ ಚಂದ್ರಕಾಂತ ಮಸಾನಿ, ಶ್ರೀ ಶ್ರೀನಿವಾಸ ಬಿರಾದಾರ, ಗಾಯಕ ಶ್ರೀ ನಾಗರಾಜ ಜೋಗಿ, ಅಪ್ಪರಾವ ನವಾಡೆ, ಬೀದರ ಜಿಲ್ಲೆ ಹಳೆಯ ವಿದ್ಯಾರ್ಥಿ ಸಂಘದ ಅಧ್ಯಕ್ಷ ಶ್ರೀ ಶಿವಕುಮಾರ ಪಾಟೀಲ್, ಶ್ರೀ ರಮೇಶ ಪಾಟೀಲ್ ಪಾಶಾಪೂರ, ನಾಗಭೂಷಣ ಹುಗ್ಗೆ ಮೊದಲಾದವರು ಉಪಸ್ಥಿತರಿದ್ದರು. ಕಾರ್ಯಕ್ರಮ ನಂತರ ದಾಸೋಹ ವ್ಯವಸ್ಥೆ ಮಾಡಲಾಗಿತ್ತು.

**ಬಾದಾಮಿ ತಾಲ್ಲೂಕು** : ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕಿನ ಕಿತ್ತಲಿಯಾ ಗ್ರಾಮದಲ್ಲಿ ಪೂಜ್ಯ ಶ್ರೀ ಶ್ರೀ ಎಚ್ಚರೇಶ್ವರ ಮಹಾಸ್ವಾಮಿಗಳವರು ಶಿರೋಳ ಅವರ ದಿವ್ಯಸಾನ್ನಿಧ್ಯದಲ್ಲಿ ಸರಳವಾಗಿ, ಅರ್ಥಪೂರ್ಣವಾಗಿ ಆಚರಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀಮಠದ ಹಳೆಯ ವಿದ್ಯಾರ್ಥಿ ಶ್ರೀ ಸಂಜುಕುಮಾರ್ ಪಿ. ಜಮಾದರ್ ಅವರು ವಹಿಸಿದ್ದರು.

(ಮಾಹಿತಿ: ವಿವಿಧ ಮೂಲಗಳಿಂದ)

## ಕ್ಷೇತ್ರವಾರ್ತೆ

# ಶ್ರೀ ಸಿದ್ಧಗಂಗಾ ಮಠದಲ್ಲಿ ಕೋವಿಡ್ ಸೆಂಟರ್ ಲೋಕಾರ್ಪಣೆ

ಬಸವಾದಿ ಶರಣರ ಆದರ್ಶಗಳನ್ನು ಅಳವಡಿಸಿಕೊಂಡು ಲೋಕಕಲ್ಯಾಣಕ್ಕಾಗಿ ಸಮರ್ಪಿಸಿಕೊಂಡಿರುವ ಸಿದ್ಧಗಂಗಾ ಮಠ ಗ್ರಾಮೀಣ ಜನತೆ ಸಂಕಷ್ಟಕ್ಕೆ ಸಿಕ್ಕಿದಾಗಲೆಲ್ಲಾ ಮಾನವೀಯತೆಯಿಂದ, ಹೃದಯ ವೈಶಾಲ್ಯತೆಯಿಂದ ಸ್ಪಂದಿಸುತ್ತ ಬಂದಿರುವುದಕ್ಕೆ ಅನೇಕ ಜ್ವಲಂತ ಉದಾಹರಣೆಗಳು ಇತಿಹಾಸದಲ್ಲಿ ದಾಖಲಾಗಿದೆ. ಧರ್ಮಕ್ಕೆ ವ್ಯಾಖ್ಯಾನದಂತಿರುವ ಶ್ರೀ ಸಿದ್ಧಗಂಗಾ ಮಠ ಹಾಗೂ ಗುರು ಪರಂಪರೆಯನ್ನು ಮುನ್ನಡೆಸಿಕೊಂಡು ಬರುತ್ತಿರುವ ಪರಮಪೂಜ್ಯರಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ತಮ್ಮ ಆರಾಧ್ಯ ಗುರುಗಳಾದ ತ್ರಿವಿಧ ದಾಸೋಹಮೂರ್ತಿ, ಮಹಾಮಾನವತಾವಾದಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಹಾಕಿಕೊಟ್ಟ ಮಾರ್ಗದಲ್ಲಿಯೇ ಮುನ್ನಡೆಯುತ್ತಿದ್ದಾರೆ.


ಪರಮಪೂಜ್ಯ ಶ್ರೀಗಳವರಿಂದ ನುಡಿಸಂದೇಶ

ಕೋವಿಡ್-೧೯ ಎರಡನೇ ಅಲೆಯಿಂದ ಸೋಂಕಿತರ ಸಂಖ್ಯೆ ದಿನೇ ದಿನೇ ಹೆಚ್ಚಾಗತೊಡಗಿದ್ದು ಅವರಿಗೆಲ್ಲ ಸೂಕ್ತ ಚಿಕಿತ್ಸೆ ನೀಡಲು ಸೌಲಭ್ಯಗಳ ಕೊರತೆಯನ್ನು ಎದುರಿಸುತ್ತಿರುವುದನ್ನು ಮನಗೊಂಡ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಹೃದಯ ಮಿಡಿದು ಸೋಂಕಿತರಿಗೆ ಅನುಕೂಲ ಮಾಡಿಕೊಡುವ ನಿಟ್ಟಿನಲ್ಲಿ ಕಾರ್ಯೋನ್ಮುಖರಾಗಿ ಶ್ರೀಮಠದಲ್ಲಿರುವ ಯಾತ್ರಿನಿವಾಸದಲ್ಲಿ ತಾತ್ಕಾಲಿಕವಾಗಿ ೮೦ ಹಾಸಿಗೆಗಳುಳ್ಳ ಕೋವಿಡ್ ಕೇಂದ್ರವಾಗಿ ಪರಿವರ್ತಿಸಿ ಮೇ ೨ರಂದು ಪೂಜ್ಯ ಶ್ರೀಗಳವರ ಸಾನ್ನಿಧ್ಯದಲ್ಲಿ ತುಮಕೂರು ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಜೆ.ಸಿ. ಮಾಧುಸ್ವಾಮಿಯವರು ಲೋಕಾರ್ಪಣೆ ಮಾಡಿದರು.

ದೇವರಿಗೆ ಹೆಸರಾಗಿದ್ದ ಪುಣ್ಯಭೂಮಿಯಲ್ಲಿ ಇಂದು ಜಗತ್ತಿಗೆ ಬಂದೊದಗಿರುವ ಸಾಂಕ್ರಾಮಿಕ ಸೋಂಕಿನ ನಿವಾರಣೆಗೆ ಶ್ರಮಿಸುತ್ತಿರುವುದು ನಮ್ಮೆಲ್ಲರಿಗೂ ಅಭಿಮಾನದ ಸಂಗತಿ. ಕೆಲವರು ಮಠಮಾನ್ಯಗಳಿಗೆ ಕೋಟಿ ಕೋಟಿ ಹಣವನ್ನು ಏಕೆ ನೀಡಬೇಕು, ಅದರಿಂದ ಏನು ಪ್ರಯೋಜನ ಎಂದು ಪ್ರಶ್ನೆ ಮಾಡಿದ್ದರು. ಅಂತವರಿಗೆ ಶ್ರೀ ಸಿದ್ಧಗಂಗಾ ಮಠ ಉತ್ತರವನ್ನು ನೀಡಿದೆ ಎಂದರು.

ದಿವ್ಯ ಸಾನ್ನಿಧ್ಯ ವಹಿಸಿದ್ಧ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಶಿವನುಡಿಗಳಲ್ಲಿ ಜನರು ಬಹಳ ಸಂಕಷ್ಟ ಕಾಲದಲ್ಲಿದ್ದಾರೆ. ಕೊರೋನಾ ನಿಯಂತ್ರಣಕ್ಕಾಗಿ ಅಧಿಕಾರಿಗಳು ಹಗಲಿರುಳು ಶ್ರಮಿಸುತ್ತಿದ್ದಾರೆ. ನೋವಿನಲ್ಲಿರುವ ಜನರ ಸೇವೆಗಾಗಿ ಮಠದ ಯಾತ್ರಿ ನಿವಾಸದಲ್ಲಿ ಕೊರೋನಾ ಕೇರ್ ಸೆಂಟರ್ ಆರಂಭಿಸಲಾಗಿದೆ. ನೊಂದವರ ಸೇವೆ ಭಗವಂತನ ಸೇವೆ ಎಂದು ಹೇಳಿದರು.


ಶ್ರೀ ಸಿದ್ಧಗಂಗಾ ಮಠದಲ್ಲಿ ಪೌರ ಕಾರ್ಮಿಕರಿಗೆ ದಿನಸಿ ಕಿಟ್‌ಗಳನ್ನು ವಿತರಿಸುತ್ತಿರುವುದು



ಕೊರೋನಾ ಕೇರ್ ಸೆಂಟರ್‌ನಲ್ಲಿ ಉತ್ತಮ ವ್ಯವಸ್ಥೆ ಕಲ್ಪಿಸಲಾಗಿದೆ. ತಿಂಡಿ, ಊಟ ಸೇರಿದಂತೆ ಎಲ್ಲಾ ರೀತಿಯ ಸೌಲಭ್ಯಗಳನ್ನು ಒದಗಿಸಲಾಗಿದೆ. ಶ್ರೀಮಠದ ನೇತೃತ್ವದಲ್ಲಿ ಜಿಲ್ಲಾಡಳಿತ, ಜಿಲ್ಲಾ ಆರೋಗ್ಯ ಇಲಾಖೆ, ತಾಲ್ಲೂಕು ಆಡಳಿತ, ಸಿದ್ಧಗಂಗಾ ಆಸ್ಪತ್ರೆಯ ಸಹಕಾರದೊಂದಿಗೆ ಸೋಂಕಿತರಿಗೆ ಆರೈಕೆ ಮಾಡಲಾಗುವುದು. ಸಮಾರಂಭದಲ್ಲಿ ತುಮಕೂರು ಲೋಕಸಭಾ ಸದಸ್ಯ ಶ್ರೀ ಜಿ.ಎಸ್. ಬಸವರಾಜು, ಜಿಲ್ಲಾಧಿಕಾರಿ ಶ್ರೀ ವೈ.ಎಸ್. ಪಾಟೀಲ್, ಜಿಲ್ಲಾ ಆರೋಗ್ಯಾಧಿಕಾರಿ ಡಾ. ನಾಗೇಂದ್ರಪ್ಪ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ಸ್ವಾಮೀಜಿಯವರು ಕೋವಿಡ್ ಕೇರ್ ಸೆಂಟರ್‌ನ್ನು ಪ್ರಾರಂಭಿಸುವುದರ ಜೊತೆಗೆ ದಾಖಲಾದ ಸೋಂಕಿತರನ್ನು ಕೋವಿಡ್ ಕಿಟ್ ಧರಿಸಿ ಭೇಟಿ ಮಾಡಿ ಅವರ ಆರೋಗ್ಯ ವಿಚಾರಿಸುವುದರ ಜೊತೆಗೆ ಅವರಲ್ಲಿ ಆತ್ಮವಿಶ್ವಾಸವನ್ನು ತುಂಬಿ, ಹಣ್ಣುಗಳನ್ನು ನೀಡಿ ಮಾನವೀಯತೆಯನ್ನು ಮೆರೆದರು.

**ಮಾನವೀಯತೆಯ ಮೆರೆದ ಪೂಜ್ಯ ಶ್ರೀಗಳು:** ಕೊರೋನಾ ಬಂದು ಸಂಬಂಧಗಳಿಗೆ ಬೆಲೆಯಿಲ್ಲದಂತಾಗಿ ಮೃತ ತಂದೆಯನ್ನು ನೋಡಲು ಹೋಗದ, ಅಂತ್ಯಸಂಸ್ಕಾರ ನಡೆಸದ ಮಗ, ಹತ್ತಿರಕ್ಕೆ ಸುಳಿಯದ ಬಂಧುಗಳು, ಪ್ರೀತಿ, ಮಮತೆಗಳು ಎಲ್ಲವೂ ಮರೀಚಿಕೆಯಾಗುತ್ತಿರುವ ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಕೋವಿಡ್ ಕಿಟ್‌ನ್ನು ಧರಿಸಿ ಆಸ್ಪತ್ರೆಯಲ್ಲಿರುವ ಪ್ರತಿಯೊಬ್ಬ ರೋಗಿಗಳನ್ನು ಬೆನ್ನು ತಟ್ಟಿ ಅವರಲ್ಲಿ ಆತ್ಮವಿಶ್ವಾಸ ತುಂಬಿದ ಸನ್ನಿವೇಶ ಹೃದಯಸ್ಪರ್ಶಿಯಾದುದು. ಎಲ್ಲರನ್ನು ಪ್ರೀತಿಯಿಂದ, ಆತ್ಮೀಯತೆಯಿಂದ ಕುಶಲೋಪಹರಿಗಳನ್ನು ವಿಚಾರಿಸುತ್ತಾ, ಬೇಗ ಗುಣಮುಖರಾಗಿ ಹೊರಬರುತ್ತೀರಿ ಎಂದು ಶುಭ ಹಾರೈಸುತ್ತಾ, ಆಶೀರ್ವದಿಸಿ ಹಣ್ಣುಗಳನ್ನು ನೀಡಿದುದನ್ನು ಕಂಡಾಗ ಧನ್ಯತಾಭಾವನೆ ಉಂಟಾಗುತ್ತಿದೆ. ಸಿದ್ಧಗಂಗಾ ಆಸ್ಪತ್ರೆಯ ಸಹಯೋಗದಲ್ಲಿ ನಡೆಯುತ್ತಿರುವ ಈ ಕೋವಿಡ್ ಕೆರೆ ಸೆಂಟರ್‌ನಲ್ಲಿ ದಾಖಲಾದ ಎಲ್ಲಾ ಸೋಂಕಿತರೂ ಗುಣಮುಖರಾಗುತ್ತಿರುವುದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಾಶೀರ್ವಾದ, ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಕಳಕಳಿ, ಕ್ರಿಯಾಶೀಲತೆ, ದಯಾಪರತೆಯೇ ಕಾರಣ.

ಸ್ವಾಮೀಜಿಯವರು ಕೋವಿಡ್ ಸೆಂಟರ್‌ಗೆ ಭೇಟಿ ನೀಡಿ ರೋಗಿಗಳಿಗೆ ಸಾಂತ್ವನ ಹೇಳಿ ಹಣ್ಣುಗಳನ್ನು ವಿತರಿಸುತ್ತಿರುವುದು.

















ಜನರ ಕಷ್ಟ ಸುಖಗಳಿಗೆ ಸ್ಪಂದಿಸುವ ಕಾರ್ಯವನ್ನು ಸಿದ್ಧಗಂಗಾ ಮಠದ ಗುರುಪರಂಪರೆ ಹಿಂದಿನಿಂದಲೂ ಮಾಡಿಕೊಂಡು ಬಂದಿದೆ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಅವರ ಕಾಲಘಟ್ಟದಲ್ಲಿ ಪ್ಲೇಗ್, ಕಾಲರಾ, ಬರ ಬಂದಾಗಲೆಲ್ಲಾ ಜನರು ಶ್ರೀಮಠಕ್ಕೆ ಬಂದು ಆಶ್ರಯ ಪಡೆದಿದ್ದಾರೆ. ಅನಿರೀಕ್ಷಿತವಾಗಿ ಎದುರಾದ ಕೋವಿಡ್ ೨ನೇ ಅಲೆ ಜನರಿಗೆ ಬೆಡ್ ಸಿಗದಂತೆ ಮಾಡಿತ್ತು. ಅದಕ್ಕಾಗಿ ಮಠದಿಂದಲೇ ಕೋವಿಡ್ ಕೇರ್ ಸೆಂಟರ್ ತೆರೆದು ಸೋಂಕಿರ ಅರೈಕೆ ಮಾಡಲಾಗಿದೆ.

ಶ್ರೀ ಸಿದ್ಧಲಿಂಗ ಸ್ವಾಮೀಜಿ
ಸಿದ್ಧಗಂಗಾ ಮಠಾಧ್ಯಕ್ಷರು



ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು ಮೇ ೨೮ ರಂದು ತುಮಕೂರಿಗೆ ಆಗಮಿಸಿದ್ದ ಸಂದರ್ಭದಲ್ಲಿ ಶ್ರೀಮಠದಲ್ಲಿ ವ್ಯವಸ್ಥೆ ಮಾಡಿದ್ದ ಕೋವಿಡ್ ಕೇರ್ ಸೆಂಟರ್‌ಗೆ ಭೇಟಿ ನೀಡಿ ವ್ಯವಸ್ಥೆಯನ್ನು ಪರಿಶೀಲಿಸಿ, ರೋಗಿಗಳಿಗೆ ಆತ್ಮಸ್ಥೈರ್ಯ ತುಂಬಿದರಲ್ಲದೆ ಶ್ರೀಮಠದ ಸೇವಾ ಕಾರ್ಯಕ್ಕೆ ಮೆಚ್ಚುಗೆಯನ್ನು ಸೂಚಿಸಿದರು.

## ನಾ ಧನ್ಯನಾದೆ ಬಸವಣ್ಣ



ನೀನೊರೆದ ವಚನಂಗಳನೋದಿದಡೆ
ಸಾಕು ಬಸವಣ್ಣಾ !
ರಸನೆ ಆಗುವುದು ಜೇನರಸ ಸವಿದಂತೆ
ಮನ ಮೌನದಲಿ ಪಾಲ್ಗುಡಿದು ತೇಗಿದಂತೆ
ಬುದ್ಧಿ ಜ್ಞಾನಸಾಗರದೊಳೋಲಾಡಿದಂತೆ
ಭಾವ ಅನುಭಾವದಮೃತಧಾರೆಯೊಳು ಮಿಂದಂತೆ.

ನೀಕಟ್ಟಿದ ಜಂಗಮದೇಗುಲಂಗಳ ಹೊಕ್ಕಡೆ
ಸಾಕು ಬಸವಣ್ಣಾ!
ಕಣ್ಣು ಕಾಣುವುದಲ್ಲಿ ನಡೆಸಂಸ್ಕೃತಿಯ
ಕಿವಿ ಕೇಳುವುದಲ್ಲಿ ನುಡಿಸಂಸ್ಕೃತಿಯ
ಮನ ಚಿಂತಿಪುದಲ್ಲಿ ಕಾಯಕರಹಸ್ಯವ
ಭಾವ ಧ್ಯಾನಿಪುದಲ್ಲಿ ಸಮತ್ವಯೋಗವ.

ನೀ ಕಡೆದ ವಿಚಾರಕಡಲೊಳಗೆ ಧುಮಿಕಿದಡೆ
ಸಾಕು ಬಸವಣ್ಣಾ!
ಕರೆಯಲಹುದು ಭಕ್ತಿಯೆಂಬ ಕಾಮಧೇನು
ನೀಡಲಹುದು ದಾಸೋಹವೆಂಬ ಕಲ್ಪವೃಕ್ಷ
ಕಣ್ದೆರೆಯಲಹುದು ಎಲ್ಲ ನನ್ನವರೆಂಬ ಚಿಂತಾಮಣಿ
ಮಾಡಲಹುದು ತನ್ನಂತೆ ಭಾವವೆಂಬ ಪರುಷಮಣಿ.

ಇಂತೀ ನೀನೊರೆದ ವಚನಂಗಳನೋದಿ
ನೀ ಕಟ್ಟಿದ ಜಂಗಮದೇಗುಲಂಗಳ ಹೊಕ್ಕು
ನೀ ಕಡೆದ ವಿಚಾರ ಕಡಲೊಳಗೆ ಧುಮಿಕಿ
ನಾ ಧನ್ಯನಾದೆ! ದಿಗ್ಭ್ರಾಂತನಾದೆ! ಬಸವಣ್ಣಾ!

-ಕೋ.ರಂ. ಬಸವರಾಜು







# ಕೊರೋನಾ ಮಹಾಮಾರಿಯನ್ನು ಕುರಿತು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಮನದಾಳದ ಮಾತು



ಎರಡನೇ ಅಲೆ ಕೊರೋನಾ ಪ್ರಾರಂಭವಾಗಿ ಮೊದಲನೇ ಅಲೆಗಿಂತ ಅತ್ಯಂತ ಕಠಿಣವಾದ ಪರಿಸ್ಥಿತಿ ಉಂಟಾಗಿದೆ. ಮೊದಲನೇ ಅಲೆಯಲ್ಲಿ ಅಷ್ಟು ಸಾವು ಸಂಭವಿಸಿರಲಿಲ್ಲ. ಈಗಾಗಲೇ ಎರಡನೇ ಅಲೆಯಲ್ಲಿ ತುಂಬಾ ಸಾವು ಆಗ್ತ ಇದೆ. ಆಸ್ಪತ್ರೆಗಳಲ್ಲಿ ಹಾಸಿಗೆಗಳು ಸಿಗುತ್ತಿಲ್ಲ, ಆಮ್ಲಜನಕ ಸಿಗುತ್ತಿಲ್ಲ. ಶವ ಸಂಸ್ಕಾರಕ್ಕೆ ಶವಗಾರಗಳ ಮುಂದೆ ಸಾಲಿನಲ್ಲಿ ನಿಲ್ಲಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ. ಈ ಪರಿಸ್ಥಿತಿ ನೋಡುತ್ತಿದ್ದರೆ ಬಹಳ ಭಯಂಕರವಾಗಿರುವಂತೆ ಕಾಣುತ್ತಿದೆ. ಈ ಸಂದರ್ಭದಲ್ಲಿ ನಾವೆಲ್ಲರೂ ಆದಷ್ಟು ಎಚ್ಚರಿಕೆಯಿಂದ ಇರಬೇಕಾಗಿದೆ. ಕೇವಲ ಕಾನೂನು, ಸರ್ಕಾರದ ಮೇಲೆ ಅವಲಂಬಿತವಾಗದೆ ಪ್ರತಿಯೊಬ್ಬ ವ್ಯಕ್ತಿಯ ಮೇಲೆ ಕೂಡ ಈ ಜವಾಬ್ದಾರಿಯಿದೆ. ನಾವೆಲ್ಲರೂ ಕೂಡ ಕೋವಿಡ್ ನಿಯಮಗಳನ್ನು ಚಾಚೂ ತಪ್ಪದೆ ಪಾಲನೆ ಮಾಡಬೇಕಾಗಿರುವುದು ಅತ್ಯಂತ ಅಗತ್ಯವಾಗಿದೆ. ಮಕ್ಕಳು, ಯುವಕರು ಈ ರೋಗಕ್ಕೆ ತುತ್ತಾಗಿ ಸಾವನ್ನಪ್ಪುತ್ತಿರುವುದನ್ನು ನೋಡಿ ದುಃಖವಾಗಿದೆ. ಇದು ದುರಂತವಾಗಿರುವಂತಹುದು. ವಯಸ್ಸಾದವರು ಬೇರೆ ಬೇರೆ ಕಾಯಿಲೆ ಇದ್ದವರೂ ಕೂಡ ಸಾವನ್ನಪ್ಪುತ್ತಿರುವುದು ನೋವಿನ ಸಂಗತಿ. ಎಲ್ಲರೂ ಎಚ್ಚೆತ್ತುಕೊಂಡು ಜಾಗೃತರಾಗಬೇಕಾಗಿದೆ.



ಕೋವಿಡ್ ನಿಯಮಗಳನ್ನು ಪ್ರತಿಯೊಬ್ಬರು ಪಾಲನೆ ಮಾಡಬೇಕು. ಸರ್ಕಾರ ಹೇಳುತ್ತಿದೆ, ಪೋಲೀಸ್‌ನವರು ಕೇಳುತ್ತಿದ್ದಾರೆ. ದಂಡ ಹಾಕುತ್ತಾರೆ ಎಂದು ಅಷ್ಟಕ್ಕೇ ಸೀಮಿತವಾಗಿರಬಾರದು. ನಮಗನಿಸುತ್ತದೆ ಬಹಳ ಜನ ಮಾಸ್ಕ್ ಹಾಕಿಕೊಳ್ಳುತ್ತಿಲ್ಲ. ಅಂತರವನ್ನು ಕಾಯ್ದುಕೊಳ್ಳುತ್ತಿಲ್ಲ. ಸಭೆ ಸಮಾರಂಭಗಳಲ್ಲಿ ಪಾಲ್ಗೊಳ್ಳುತ್ತಿರುವುದನ್ನು ನಿಲ್ಲಿಸಿಲ್ಲ. ಈ ಎರಡನೇ ಅಲೆ ಹೊಸರೂಪಾಂತರ ಹೊಂದಿದ್ದು ಡೆಡ್ಲಿ ಕಿಲ್ಲರ್ ಎಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಮೊದಲನೇ ಅಲೆಗಿಂತ ಹೆಚ್ಚು ವೇಗವಾಗಿ, ವಾಯು ವೇಗದಲ್ಲಿ ಹರಡುತ್ತಿದೆ. ಈ ರೋಗ ಹರಡದಂತೆ ಮಾಡಲು ಎಲ್ಲರೂ ಮನೆಯೊಳಗೆ ಇರಬೇಕು. ಅವಶ್ಯಕತೆ ಇದ್ದರೆ ಮಾತ್ರ ಮನೆಯಿಂದ ಹೊರಗೆ ಹೋಗಬೇಕು. ಸಭೆ, ಸಮಾರಂಭ, ಜನ ಸಂಪರ್ಕದಿಂದ ದೂರ ಇದ್ದಷ್ಟು ಒಳ್ಳೆಯದು. ಹೊರಗೆ ಹೋಗುವಾಗ ಮಾಸ್ಕನ್ನು ಕಡ್ಡಾಯವಾಗಿ ಹಾಕಿಕೊಳ್ಳಬೇಕು.

ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸಿಕೊಳ್ಳುವ ಆಹಾರವನ್ನು ಸೇವಿಸಬೇಕು. ನೆಗಡಿಯನ್ನು ನಿಯಂತ್ರಣಕ್ಕೆ ತರಲು ಬಿಸಿನೀರಿನ ಆವಿಯನ್ನು ತೆಗೆದುಕೊಳ್ಳಬೇಕು. ಕಾಲಕಾಲಕ್ಕೆ ಕಷಾಯಗಳನ್ನು ಕುಡಿಯಬೇಕು. ಕೋವಿಡ್ ನಿಯಮಗಳನ್ನು ಪಾಲಿಸುವ ಮೂಲಕ ನಮ್ಮ ರಕ್ಷಣೆಯನ್ನು ನಾವೇ ಮಾಡಿಕೊಳ್ಳಬೇಕು ಎಂದು ಸಾರ್ವಜನಿಕರಲ್ಲಿ ಪೂಜ್ಯ ಶ್ರೀಗಳವರು ಮನವಿ ಮಾಡಿದ್ದಾರೆ.

ಪರಮಪೂಜ್ಯ ಶ್ರೀಗಳವರು ಕೋವಿಡ್ ಲಸಿಕೆಯನ್ನು ಹಾಕಿಸಿಕೊಳ್ಳುವುದರ ಮೂಲಕ ಜನರ ಮನಸ್ಸಿನಲ್ಲಿ ಮೂಡಿರುವ ಭಯವನ್ನು ದೂರ ಮಾಡಿದರು.

॥ಕಾಯಕವೇ ಕೈಲಾಸ॥

ಓಂ

**ಶ್ರೀ ಸಿದ್ಧಲಿಂಗೇಶ್ವರ ಅನಾಥಾಲಯ, ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ -572 104.**

**ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು**
ಅಧ್ಯಕ್ಷರು

☎ : 2283311
Fax 0816-: 2282511
E-mail : ssmathaccount@gmail.com

ಕ್ರಸಂ. ಸಿ.ಅ. : 3/2021-22

ದಿನಾಂಕ : 17-6-2021

**ಪ್ರಕಟಣೆ**

**ಶ್ರೀಸಿದ್ಧಲಿಂಗೇಶ್ವರ ಅನಾಥಾಲಯದ ಪ್ರವೇಶ ಪತ್ರಗಳನ್ನು ದಿನಾಂಕ 21.06.2021 ರಿಂದ ಕೊಡಲಾಗುವುದು. ಶ್ರೀ ಸಿದ್ಧಲಿಂಗೇಶ್ವರ ಅನಾಥಾಲಯಕ್ಕೆ ಹೊಸದಾಗಿ ಸೇರಿಕೊಂಡು ವಿದ್ಯಾಭ್ಯಾಸ ಮಾಡಬಯಸುವ ಗ್ರಾಮೀಣ ಬಡ ಕುಟುಂಬದ ವಿದ್ಯಾರ್ಥಿಗಳು ಶ್ರೀ ಮಠದಲ್ಲಿ ಪ್ರವೇಶ ಪತ್ರವನ್ನು ಪಡೆಯಬಹುದು. ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದವರಿಗೆ ಆದ್ಯತೆಯನ್ನು ಕೊಡಲಾಗುವುದು.**

**ಸರಿಯಾಗಿ ಭರ್ತಿ ಮಾಡಿದ ಪ್ರವೇಶ ಪತ್ರವನ್ನು ಆಯಾ ತಾಲ್ಲೋಕಿನ ತಹಶೀಲ್ದಾರ್ ರವರಿಂದ ನಿಗಧಿತ ನಮೂನೆಯಲ್ಲಿ ಧೃಢೀಕರಿಸಲ್ಪಟ್ಟ ವಾರ್ಷಿಕ ವರಮಾನದ ಆದಾಯ ಪ್ರಮಾಣ ಪತ್ರವನ್ನು ಉಳಿದ ಸರ್ಟಿಫಿಕೇಟುಗಳೊಂದಿಗೆ ದಿನಾಂಕ 30.06.2021ರ ಒಳಗೆ ಅನಾಥಾಲಯದ ಕಛೇರಿಯನ್ನು ತಲುಪುವಂತೆ ಕಳುಹಿಸುವುದು. ಸರಿಯಾಗಿ ಭರ್ತಿ ಮಾಡದಿರುವ ಮತ್ತು ಸರ್ಟಿಫಿಕೇಟುಗಳನ್ನು ಲಗತ್ತಿಸದೆ ಬರುವ ಪ್ರವೇಶ ಪತ್ರಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.**

**ಪ್ರವೇಶವನ್ನು ಅಪೇಕ್ಷಿಸುವ ವಿದ್ಯಾರ್ಥಿಗಳು, ದಿನಾಂಕ 01.07.2021 ರಿಂದ ಪ್ರಾರಂಭವಾಗುವ ಸಂದರ್ಶನದ ವೇಳೆಯಲ್ಲಿ ಖುದ್ದಾಗಿ ಬಂದು ಅಧ್ಯಕ್ಷರ ಸಂದರ್ಶನ ಪಡೆಯುವುದು. ಪ್ರತ್ಯೇಕವಾದ ಸಂದರ್ಶನದ ಪತ್ರಗಳನ್ನು ಕಳುಹಿಸಿ ಕೊಡಲಾಗುವುದಿಲ್ಲ.**

(ಶ್ರೀ ಸಿದ್ಧಲಿಂಗಸ್ವಾಮಿಗಳು)



ನೆನಪಿನಂಗಳದಿಂದ

# ಮುದ್ದೆ ತಿರುವಿ ಮಕ್ಕಳಿಗೆ ಬಡಿಸುತ್ತಿದ್ದ ಶ್ರೀಗಳು

– ಡಾ. ಎಸ್. ಪರಮೇಶ್ *

ಸಿದ್ಧಗಂಗಾ ಹಿರಿಯ ಶ್ರೀಗಳು ಮಕ್ಕಳಲ್ಲೇ ದೇವರನ್ನು ಕಾಣುತ್ತಿದ್ದರು. ಮೊದಲಿನಿಂದಲೂ ಊರೂರು ಸುತ್ತಿ ಭಿಕ್ಷಾಟನೆ ಮಾಡಿ ತಂದು ಸಾಕುತ್ತಿದ್ದರು. ಶಿವಕುಮಾರ ಶ್ರೀಗಳು ಮಠದ ಜವಾಬ್ದಾರಿ ಹೊತ್ತ ನಂತರ ಇದ್ದ ಶ್ರೀಗಳ ಶಿಷ್ಯಂದಿರಲ್ಲಿ ಕೆಲವರನ್ನು ನಾನು ಮಾತನಾಡಿಸಿದ್ದೇನೆ. ಆ ಕಾಲದಲ್ಲಿ ಶ್ರೀಗಳು ಹೇಗೆ ಮಕ್ಕಳನ್ನು ನೋಡಿಕೊಳ್ಳುತ್ತಿದ್ದರು ಎನ್ನುವ ಬಗ್ಗೆ ಕೆಲ ಮಾಹಿತಿಯನ್ನು ಅವರಿಂದ ಕೇಳಿ ಪಡೆದುಕೊಂಡಿದ್ದೇನೆ. ಅದನ್ನು ಇಲ್ಲಿ ವಿವರಿಸುತ್ತೇನೆ.

ಶ್ರೀಗಳು ಮಠವನ್ನು ಆರಂಭಿಸಿದ ಹೊತ್ತಿನಲ್ಲಿ ಮಠದಲ್ಲಿ ೨೦ ರಿಂದ ೩೦ ಮಕ್ಕಳು ಇದ್ದರಂತೆ. ಮಠದಲ್ಲಿ ಮಕ್ಕಳಿಗೆ ಅಡುಗೆ ಮಾಡಲು ಅಡುಗೆಯವರು ಬರಲಿಲ್ಲ ಎಂದರೆ ಶ್ರೀಗಳೇ ಮುದ್ದೆಯನ್ನು ತಿರುವಿ, ಸಾಲಾಗಿ ಮಕ್ಕಳನ್ನು ಕೂರಿಸಿ ಮುದ್ದೆ ಬಡಿಸುತ್ತಿದ್ದರಂತೆ. ಜೊತೆಗೆ ಶ್ರೀಗಳು ಎಲ್ಲಿಯೇ ಭಿಕ್ಷೆಗೆ ಹೋದರು ಕೇಳುತ್ತಿದ್ದದ್ದು ಒಂದೇ ಮಾತು, ಮಠದಲ್ಲಿ ಮಕ್ಕಳಿದ್ದಾರೆ ನಿಮ್ಮ ಕೈಲಾಗಿದ್ದು ಕೊಡಿ ಎಂದು.

ಶ್ರೀಗಳು ಮಠದ ಅಭಿವೃದ್ಧಿಗಾಗಿ ಎಂದೂ ಭಿಕ್ಷಾಟನೆಗೆ ಹೋದವರಲ್ಲ. ಅವರು ಮಕ್ಕಳ ಹೊಟ್ಟೆ ತುಂಬಿಸಲು ಹೋದವರು. ಎಷ್ಟೋ ಬಾರಿ ಶ್ರೀಗಳಿಗೆ ಏನೂ ಕೊಡದಂತೆ ಕಳುಹಿಸಿದವರೂ ಇದ್ದಾರೆ. ಏನೂ ಕೊಡಲಿಲ್ಲ ಎಂದು ಯಾವತ್ತೂ ಶ್ರೀಗಳು ಬೇಸರಗೊಂಡಿಲ್ಲ. ಕೈ ತುಂಬಿಸಿದವರ ಪುಣ್ಯದ ಪಾಲಿನಲ್ಲಿ ಕೊಡದವರ ಕೈಯನ್ನೂ ತುಂಬಿಸು ಸಿದ್ದಲಿಂಗೇಶ್ವರ ಎಂದು ಹೇಳಿ ಭಿಕ್ಷಾಟನೆಗೆ ಮುಂದಕ್ಕೆ ಸಾಗುತ್ತಿದ್ದರಂತೆ. ಮುಂದಿನ ಬಾರಿ ಅವರು ಭಿಕ್ಷೆಗೆ ಅದೇ ಅಂಗಡಿಗೆ ಬಂದಾಗ ಆ ಅಂಗಡಿ ಅಭಿವೃದ್ಧಿಯಾಗಿರೋದನ್ನ ಶ್ರೀಗಳು ಕಾಣುತ್ತಿದ್ದರಂತೆ. ಅಂಗಡಿಯವರೂ ಅಷ್ಟೇ; ಬುದ್ಧಿ ಅವತ್ತು ಭಿಕ್ಷಾಟನೆಗೆ ಬಂದಾಗ ಕೊಡಲು ಭಕ್ತಿ ಬಿಟ್ಟರೆ ಏನೂ ಇರಲಿಲ್ಲ, ಅಂದು ನೀವು ಕಾಲಿಟ್ಟ ಗಳಿಗೆ ನಾನು ಚೇತರಿಸಿಕೊಂಡಿದ್ದೇನೆ ಎಂದು ಕೈಲಾದ ದಾನ ನೀಡುತ್ತಿದ್ದರಂತೆ, ವಾರ್ಷಿಕವಾಗಿ ಜಾತ್ರೋತ್ಸವದ ಸಮಯದಲ್ಲಿ ತುಮಕೂರು ನಗರದ ಪ್ರಮುಖ ಬೀದಿಗಳಲ್ಲಿ ಭಿಕ್ಷಾಟನೆ ನಡೆಯುತ್ತಿತ್ತು. ಈಗಲೂ ನಡೆಯುತ್ತಿದೆ.

ಜಾತಿ, ಧರ್ಮ ಯಾವುದೇ ಇರಲಿ ಶ್ರೀಗಳನ್ನು ಕಂಡ ತಕ್ಷಣ ಕೊಡುವವರ ಮನಸ್ಸು ತುಂಬುತ್ತಿತ್ತು. ಮುಸಲ್ಮಾನ ಬಾಂಧವರಿಗಂತೂ ಶ್ರೀಗಳನ್ನು ಕಂಡರೆ ಅತೀವ ಪ್ರೀತಿ ಹಾಗೂ ಭಕ್ತಿಯನ್ನು ವ್ಯಕ್ತಪಡಿಸುತ್ತಿದ್ದರು. ಶ್ರೀಗಳು ಅವರ ಅಂಗಡಿಯ ಮುಂದೆ ಬಂದರೆ ಐಶ್ವರ್ಯ ಎಂದು ತಮ್ಮ ಕೈಲಾದ ದಾನವನ್ನು ಶ್ರೀಗಳಿಗೆ ನೀಡಿ ಆಶೀರ್ವಾದ ಪಡೆಯುತ್ತಿದ್ದರು.

ಪ್ರತಿ ಅಂಗಡಿಯ ಮುಂದೆ ಹೋದಾಗ ಶ್ರೀಗಳು ಕೇವಲ ದಾನವನ್ನಷ್ಟೇ ಪಡೆಯುತ್ತಿರಲಿಲ್ಲ, ಅವರ ಅಂಗಡಿಯ ಪರಿಸ್ಥಿತಿ ಹೇಗಿದೆ? ವ್ಯಾಪಾರ ಹೇಗೆ ಸಾಗುತ್ತಿದೆ? ಎಣ್ಣೆ ಹಾಗೂ ಬೇಳೆಕಾಳುಗಳ ದರ ಯಾಕಿಷ್ಟು ಹೆಚ್ಚಾಗಿದೆ ಎಂಬೆಲ್ಲಾ ಮಾಹಿತಿ ಪಡೆಯುತ್ತಿದ್ದರು. ಒಂದು ವಾರಗಳ ಕಾಲ ಭಿಕ್ಷಾಟನೆ ಮಾಡಿದರೆ ಮಠಕ್ಕೆ ವರ್ಷಕ್ಕಾಗುವಷ್ಟು ದವಸ, ಧಾನ್ಯಗಳು ಸಿಗುತ್ತಿದ್ದವು. ಹೆಚ್ಚಿನ ಹಣವನ್ನು ಕೊಡುವುದನ್ನು ನೋಡಿ ಈ ಹಣದ ಬದಲು ಅಕ್ಕಿಯನ್ನು ನೀಡಿ ಎಂದು ಕೇಳುತ್ತಿದ್ದರು.

ಬುದ್ಧಿ ಅನ್ನೋದ್ರಲ್ಲಿ ಅಮ್ಮ ಎನ್ನುವ ಕೂಗಿತ್ತು : ಮಠದಲ್ಲಿ ವ್ಯಾಸಂಗ ಮಾಡುವ ೧೦ ಸಾವಿರ ಮಕ್ಕಳಲ್ಲಿ ೨೦೦ ರಿಂದ ೩೦೦ ಮಕ್ಕಳು ಅನಾಥ ಮಕ್ಕಳಿದ್ದಾರೆ. ಅವರ್ನು ನೋಡಿಕೊಳ್ಳಲು ಯಾರೂ ಇಲ್ಲ. ಅವರಿಗೆ ತನ್ನವರು ಯಾರೂ ಎಂಬುದೂ ಕೂಡ ಗೊತ್ತಿಲ್ಲ. ಅಂತಹ ಮಕ್ಕಳ ಬಗ್ಗೆ ಶ್ರೀಗಳಿಗೆ ಅತೀವ ಕಾಳಜಿ ಇತ್ತು. ಅನಾಥ ಮಕ್ಕಳು ರಾಜ್ಯದ ಎಲ್ಲಾದರೂ ಕಂಡರೆ ತಂದು ಮಠಕ್ಕೆ ಬಿಡಿ ಎಂದು ಶ್ರೀಗಳು ಹೋದಲೆಲ್ಲಾ ಹೇಳುತ್ತಿದ್ದರು. ಅನಾಥ ಮಕ್ಕಳಿಗೆ ನಾವು ಶ್ರೇಷ್ಠವಾದದ್ದೇನಾದರೂ ಕೊಡುವಂತಿದ್ದರೆ, ಅದು ಪ್ರೀತಿ, ವಾತ್ಸಲ್ಯ ಮಾತ್ರ! ಒಂದು ಬೀಜ ಹಣ್ಣಿನಿಂದ ಬೇರ್ಪಟ್ಟು ಭೂಮಿಗೆ ಸೇರಿದಾಗ ಅದಕ್ಕೆ ಗಾಳಿ, ಬೆಳಕು ಎನ್ನುವ ಪ್ರೀತಿ ಸಂಸ್ಕಾರ ಸಿಕ್ಕರೆ, ಹೇಗೆ ಅದು ಭೂಮಿಯ ಆಳಕ್ಕೆ ಬೇರನ್ನು ಬಿಟ್ಟು ಆಕಾಶದೆತ್ತರಕ್ಕೆ ಬೆಳೆದು

* ವ್ಯವಸ್ಥಾಪಕ ನಿರ್ದೇಶಕರು, ಶ್ರೀ ಸಿದ್ಧಗಂಗಾ ಆಸ್ಪತ್ರೆ, ಸಂಶೋಧನಾ ಕೇಂದ್ರ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ರಸ್ತೆ (ಬಿ.ಹೆಚ್. ರಸ್ತೆ), ತುಮಕೂರು





ನಿಲ್ಲುತ್ತದೆಯೋ ಹಾಗೆ, ಅನಾಥ ಮಕ್ಕಳಿಗೆ ನಾವು ಗಾಳಿ ಬೆಳಕು ಎನ್ನುವ ಅಕ್ಕರೆ, ವಾತ್ಸಲ್ಯವನ್ನು ನೀಡಿದರೆ ಅವರು ಸಂಮೃದ್ಧವಾಗಿ ಬೆಳೆಯುತ್ತಾರೆ ಎಂದು ಶ್ರೀಗಳು ಹೇಳುತ್ತಿದ್ದರು.

ಮಠದ ಬೇರೆಲ್ಲಾ ಮಕ್ಕಳು ಒಂದಡೆಯಾದರೆ, ಯಾರೂ ಇಲ್ಲದ ಮಕ್ಕಳಿಗೆ ಶ್ರೀಗಳು ಅಕ್ಷರಶಃ ತಾಯಿಯಾಗಿದ್ದರು. ಅವರ ಅಂತಃಕರಣದ ಪ್ರೀತಿಯ ಮಡಿಲ್ಲಿನಲ್ಲಿ ಮಕ್ಕಳು ಬೆಳೆಯುತ್ತಿದ್ದರು. ರಜಾ ಅವಧಿಯಲ್ಲಿ ಮಕ್ಕಳು ತಮ್ಮ ಮನೆಗಳಿಗೆ ಹೋಗುತ್ತಿದ್ದರು. ಆ ಸಮಯದಲ್ಲಿ ಎಲ್ಲರನ್ನೂ ಕಳುಹಿಸಿ ಮೂಕಭಾವದಿಂದ ತನ್ನವರಾರು ಇಲ್ಲವೆಂಬಂತೆ ನೋಡುತ್ತಿದ್ದ ಮಕ್ಕಳ ಬೆನ್ನಮೇಲೆ ಶ್ರೀಗಳ ಕೈ ಸದಾ ಇರುತ್ತಿತ್ತು.

ಅಪ್ಪ ಅಮ್ಮ ಯಾರೂ ಎಂದು ಗೊತ್ತಿಲ್ಲ. ಇತ್ತ ನಿತ್ಯ ಆಡುತ್ತಿದ್ದ ಸ್ನೇಹಿತರೂ ಇಲ್ಲವೆಂದಾಗ ಆ ಮಕ್ಕಳಿಗೆ ನೆನಪಾಗುತ್ತಿದ್ದದ್ದು ಮಾತೃಸ್ವರೂಪಿ ಶ್ರೀಗಳು. ಶ್ರೀಗಳು ಅಷ್ಟೇ ಅವರನ್ನು ಅಕ್ಕರೆಯಿಂದ ಪೊರೆಯುತ್ತಿದ್ದರು. ಅನಾಥ ಮಕ್ಕಳಿಗೆ ದೇವರೇ ತಂದೆ ತಾಯಿ. ದೇವರ ಮಕ್ಕಳನ್ನು ನಾವು ಬೀದಿಯಲ್ಲಿ ಬಿಡಬಾರದು. ಎಲ್ಲಾ ಇದ್ದವರು ಏನೂ ಇಲ್ಲದವರಿಗೆ ಆಸರೆಯಾಗಿರುವುದು ನಿಜವಾದ ಮನುಷ್ಯತ್ವ ಎಂದು ಸದಾ ಶ್ರೀಗಳು ಹೇಳುತ್ತಿದ್ದರು.

ರಜಾ ದಿನಗಳಲ್ಲಿ ಆ ಮಕ್ಕಳು ನಿತ್ಯ ಶ್ರೀಗಳು ಶಿವಪೂಜೆ ಮುಗಿಸಿ ಬರುವ ವೇಳೆಗೆ ಮಠದ ಅವರ ಕಛೇರಿಯ ಪ್ರಾಂಗಣದಲ್ಲಿ ಕುಳಿತಿರಬೇಕಿರುತ್ತಿತ್ತು. ಬಂದ ತಕ್ಷಣ ಶ್ರೀಗಳು ಮಕ್ಕಳನ್ನು ಸುತ್ತಲೂ ಕುಳ್ಳಿರಿಸಿಕೊಂಡು ಒಬ್ಬಬ್ಬರನ್ನೇ ಮಾತನಾಡಿಸುತ್ತಾ ಅವರ ಬೆನ್ನು ತಡವುತ್ತಾ, ಅವರಿಗೆ ಕಥೆ ಹೇಳುತ್ತಾ ಅವರಿಗೆ ಇರುವ ಕೊರಗನ್ನು ನಿವಾರಿಸುತ್ತಿದ್ದರು. ಮಕ್ಕಳು ತಮ್ಮ ಜನ್ಮಕ್ಕೆ ಕಾರಣವಾಗಿ ಬೀದಿಗೆ ಬಿಟ್ಟ ತಂದೆ ತಾಯಿಯರ ಬಗ್ಗೆ ಯಾವತ್ತು ಶಾಪ ಹಾಕಿಲ್ಲ. ಕಾರಣ, ಶ್ರೀಗಳು, ಪ್ರತಿಯೊಂದು ಜೀವಿಯ ಹುಟ್ಟು ಹೇಗೆ ಆಗುತ್ತದೆ ಎಂಬುದು ಮುಖ್ಯವಲ್ಲ. ಆ ಜೀವಿ ತನ್ನ ಜೀವಿತ ಅವಧಿಯನ್ನು ಮುಗಿಸುವಾಗ ಎಷ್ಟು ಜೀವಗಳು ನೊಂದು ಕಣ್ಣೀರು ಹಾಕುತ್ತವೆ ಎಂಬುದು ಮುಖ್ಯ. ಜನ್ಮ ಕೊಟ್ಟವರು ಕೆಟ್ಟವರಾಗಿದ್ದರೂ ದೇವರೇ ನೀಡಿದ ಜನ್ಮವನ್ನು ಸಾರ್ಥಕವಾಗಿಸಿಕೊಳ್ಳುವ ಕಡೆಗೆ ನಮ್ಮ ಗುರಿಯಿರಬೇಕು ವಿನಃ ಜನ್ಮ ಕೊಟ್ಟವರು ಬಗ್ಗೆ ಯೋಚಿಸಬಾರದು. ನಾನು ಅನಾಥ ಎಂದುಕೊಂಡರೆ ನಮ್ಮ ಬದುಕಿನ ಒಳಗಣ್ಣು ಚಿಕ್ಕದಾಗುತ್ತದೆ. ನಾನು ದೇವರ ಮಗ ಎಂದುಕೊಂಡರೆ ನಮ್ಮ ದೃಷ್ಟಿ ವಿಸ್ತಾರವಾಗುತ್ತದೆ ಎಂದು ಮಕ್ಕಳಿಗೆ ಹೇಳುತ್ತಿದ್ದರು. ಕೆಲ ಮಕ್ಕಳು ತಮ್ಮ ಒಂಟಿತನದ ಯಾತನೆಯಿಂದ ಬಿಸಿ ಗಾಜಿನಂತಾಗಿ ಶ್ರೀಗಳು ಮುಟ್ಟಿದರೆ ಸಾಕು ಕಣ್ಣೀರು ತುಂಬಿಕೊಂಡು ಬಿಕ್ಕಳಿಸುತ್ತಿದ್ದರು. ಶ್ರೀಗಳು ಅವರನ್ನು ಅತ್ಯಂತ ಪ್ರೇಮದಿಂದ ಮಾತನಾಡಿಸಿ ಸಿಹಿ ನೀಡಿ ಮುದ್ದಿಸುತ್ತಿದ್ದರು. ತನ್ನವರಾರು ಎಂದು ಗೊತ್ತಿಲ್ಲದ ಮಕ್ಕಳ ಕಣ್ಣಲ್ಲಿ ನೋವಿನ ಕಣ್ಣೀರು ತುಂಬಿ, ತಾಯಿಯಾದ ಶ್ರೀಗಳ ಮೇಲಿನ ಭಕ್ತಿ ಪರಿವರ್ತನೆಯಾಗಿ ತುಳುಕುತ್ತಿತ್ತು. ಬುದ್ಧಿ ಅನ್ನೋದ್ರಲ್ಲಿ ಅಮ್ಮ ಎನ್ನುವ ಕೂಗಿತ್ತು.

**ಒಂದರಿಂದ ಇನ್ನೊಂದು ಕೆಲಸ ಮಾಡುವುದೇ ವಿಶ್ರಾಂತಿ** : ೨೪ ಗಂಟೆಗಳಲ್ಲಿ ಶ್ರೀಗಳು ನಿದ್ದೆಗೆ ಜಾರುತ್ತಿದ್ದದ್ದು ಕೇವಲ ನಾಲ್ಕು ಗಂಟೆಗಳು ಮಾತ್ರ ಇನ್ನುಳಿದ ೨೦ ಗಂಟೆಗಳ ಕಾಲ ಶ್ರೀಗಳದ್ದು ಪ್ರಯಾಣ. ನಿರಂತರ ಜನಸೇವಾ ಕಾರ್ಯ. ತ್ರಿವಿಧ ದಾಸೋಹ ಕಾರ್ಯಕ್ರಮ. ಹಾಗಾದರೆ ಶ್ರೀಗಳಿಗೆ ವಿಶ್ರಾಂತಿಯೇ ಇಲ್ಲವಾ ? ವಿಶ್ರಾಂತಿ ವಿಚಾರವಾಗಿ ಶ್ರೀಗಳನ್ನು ಖುದ್ದು ನಾನೇ ಕೇಳಿದ್ದೆ. ಅದಕ್ಕವರು 'ಒಂದು ಕೆಲಸ ಮುಗಿಸಿ ಇನ್ನೊಂದು ಕೆಲಸದಲ್ಲಿ ತೊಡಗುವುದೇ ವಿಶ್ರಾಂತಿ, ಕಣ್ಣಿನ ಕೆಲಸ ಮುಗಿದ ತಕ್ಷಣ ಕಿವಿಗೆ, ಕಿವಿಯ ನಂತರ ಕೈಗಳಿಗೆ, ಕೈಗಳ ನಂತರ ಕಾಲುಗಳಿಗೆ ಹೀಗೆ ಒಂದು ಕೆಲಸದಿಂದ ಇನ್ನೊಂದು ಕೆಲಸಕ್ಕೆ ನಾವು ಬದಲಾಗುತ್ತಾ ವಿಶ್ರಾಂತಿ ಪಡೆಯಬೇಕು' ಎಂದಿದ್ದರು.

ಸಹಜವಾಗಿ ಮನುಷ್ಯನಿಗೆ ವಯಸ್ಸು ಹೆಚ್ಚುತ್ತಾ ದೇಹದಲ್ಲಿನ ಅಂಗಾಂಗಳಲ್ಲಿ ಜೀವಾಣುಗಳು ನಶಿಸುತ್ತಾ ಬರುತ್ತವೆ. ಆದರೆ ಶ್ರೀಗಳ ದೇಹ ಯಾವತ್ತೂ ವಿಶ್ರಾಂತಿ ಪಡೆದಿಲ್ಲ. ಅವರು ದಣಿವರಿಯದ ಮಹಾಜ್ಞಾನಿಯಾಗಿದ್ದರು. ಕೆಲಸ ಯಾವತ್ತು ಮನಸ್ಸಿಗೆ ಹೊರೆಯಾಗುತ್ತದೆಯೋ ಆಗ ದೇಹಕ್ಕೂ ಹೊರೆ ಯಾದಂತೆ ಕಾಣುತ್ತದೆ. ಯಾವಾಗ ಮನಸ್ಸಿಗೆ ಮಾಡುವ ಪ್ರತಿಯೊಂದು ಕೆಲಸವೂ ಆಸಕ್ತಿಕರವೂ ಹೊಸ ವಿಚಾರಗಳ ಅಧ್ಯಯನ ಭಂಡಾರವಾಗಿ ಕಾಣಿಸುತ್ತದೆಯೋ ಆಗ ಆ ಕೆಲಸ ನಮಗೆ ಹೊರೆ ಎಂದೆನಿಸುವುದಿಲ್ಲ. ಪ್ರತಿಯೊಂದು ಕೆಲಸವನ್ನು ಅತ್ಯಂತ ತ್ವರಿತಗತಿಯಲ್ಲಿ ಪರಿಪೂರ್ಣವಾಗಿ ಮುಗಿಸುವುದು ಒಂದು ಕಲೆ. ಆ ಕಲೆ ಅರಿತವನು ಕಾಯಕಯೋಗಿಯಾಗುತ್ತಾನೆ ಎಂದು ಹೇಳುತ್ತಿದ್ದರು. ■





ಲೇಖನ

# ನೂತನ 'ಅನುಭವ ಮಂಟಪ' ಯೋಜನೆ

– ಡಾ. ಗೊ.ರು. ಚನ್ನಬಸಪ್ಪ *

೧. ಹಿನ್ನೆಲೆ : ಕಾಲಮಾನದಲ್ಲಿ ನಡೆಯುವ ಕೆಲವು ಘಟನೆಗಳು ನಿರೀಕ್ಷಿತ ಮತ್ತು ಅನಿರೀಕ್ಷಿತವಾಗಿರುತ್ತವೆ. ಕೆಲವು ಘಟನೆಗಳಂತೂ ಆಯಾ ಕಾಲಮಾನದ ಸಾಂದರ್ಭಿಕ ಅಗತ್ಯವೇ ಆಗಿರುತ್ತವೆ. ಅಂತಹ ಒಂದು ಅಗತ್ಯ ಘಟನೆ ವಿಶ್ವದ ಇತಿಹಾಸದಲ್ಲೇ ಅಪೂರ್ವವೆಂಬಂತೆ ಕನ್ನಡದ ನೆಲದಲ್ಲಿ ಹನ್ನೆರಡನೆಯ ಶತಮಾನದಲ್ಲಿ ನಡೆಯಿತು. ಆ ಘಟನೆಯ ಗಂಗೋತ್ರಿ ಕಲ್ಯಾಣ– ಇಂದಿನ ಬಸವ ಕಲ್ಯಾಣ. ಸಮಾಜೋ-ಧಾರ್ಮಿಕ ಆಂದೋಲನವೆಂದು ಕರೆಯಲಾಗಿರುವ ಆ ಘಟನೆಯ ಕಾರಣಕರ್ತರು ಬಸವಾದಿ ಶರಣರು.

ಯಾವುದೇ ಕ್ರಾಂತಿಗೆ ಕಾರಣವೊಂದಿರುತ್ತದೆ. ಅಂತೇ ಶರಣರು ನಡೆಸಿದ ಕ್ರಾಂತಿಗೆ ಒಂದು ಗಂಭೀರ ಕಾರಣವಿದೆ, ಹಿನ್ನೆಲೆಯಿದೆ. ಅದೆಂದರೆ, ಹನ್ನೆರಡನೆಯ ಶತಮಾನದಲ್ಲಿದ್ದ ಧಾರ್ಮಿಕ ಮತ್ತು ಸಾಮಾಜಿಕ ಅವ್ಯವಸ್ಥೆ. ಮಾನವ ಘನತೆ ಮತ್ತು ಸಮಾನತೆಗಳನ್ನೇ ವಿಕೃತಗೊಳಿಸಿದ್ದ ಸಂಪ್ರದಾಯವಾದಿಗಳ ಕಪಿಮುಷ್ಟಿಯಲ್ಲಿ ಅಂದಿನ ಧಾರ್ಮಿಕ ಮತ್ತು ಸಾಮಾಜಿಕ ವ್ಯವಸ್ಥೆಗಳು ಸಿಕ್ಕಿಕೊಂಡು ದಿಕ್ಕುತಪ್ಪಿದ್ದವು.

ಅಂದಿನ ಸ್ಥಿತಿ-ಗತಿಗಳು ಹೇಗಿದ್ದವು? ಮೌಲ್ಯಕ್ಷಯ, ಸವಕಲು ಸಿದ್ಧಾಂತ, ರಾಜಶಾಹಿ ಮತ್ತು ಪುರೋಹಿತಶಾಹಿಗಳ ಹುನ್ನಾರದ ಹುತ್ತವಾಗಿದ್ದವು. ಧಾರ್ಮಿಕ ಕ್ಷೇತ್ರದಲ್ಲಿ ಪೂರ್ವಜನ್ಮ-ಪುನರ್ಜನ್ಮ, ಪಾಪ-ಪುಣ್ಯ, ಸ್ವರ್ಗ-ನರಕ, ಕರ್ಮಸಿದ್ಧಾಂತ, ಅವತಾರವಾದ ಇತ್ಯಾದಿಗಳನ್ನು ಜನಸಾಮಾನ್ಯರ ತಲೆಯಲ್ಲಿ ತುಂಬಲಾಗುತ್ತಿತ್ತು. ಹೋಮ-ಹವನ, ಶಾಂತಿ-ಸಮಾರಾಧನೆಗಳು ಮೇಲು ವರ್ಗದವರ ಆಚರಣೆಗಳಾಗಿದ್ದರೆ, ಭೂತ-ಪ್ರೇತಗಳ ಆರಾಧನೆ ಹರಕೆ-ಬಲಿ ಮೊದಲಾದವು ಕೆಳವರ್ಗದವರ ಆಚರಣೆಗಳಾಗಿದ್ದವು. ದೇವರು ಮತ್ತು ಧರ್ಮದ ಬಗೆಗೆ ಕೇವಲ ಅಂಧಶ್ರದ್ಧೆ ಮತ್ತು ಮೂಢನಂಬಿಕೆಗಳನ್ನು ಹುಟ್ಟಿಸಲಾಗಿತ್ತು. ದೇವಾಲಯ ಮತ್ತು ಮೂರ್ತಿಪೂಜೆಗಳೇ ಸಂಸ್ಕೃತಿಯೆನಿಸಿ, ಪೂಜಾರಿ-ಪುರೋಹಿತರದೇ ಮೇಲುಗೈಯಾಗಿತ್ತು.

ಸಾಮಾಜಿಕ ಕ್ಷೇತ್ರದಲ್ಲಿ ವರ್ಣಾಶ್ರಮ ವ್ಯವಸ್ಥೆ ವ್ಯಕ್ತಿಯ ಸ್ಥಾನ-ಮಾನಗಳನ್ನು ನಿರ್ಧರಿಸುತ್ತಿತ್ತು. ಆ ವ್ಯವಸ್ಥೆಯಲ್ಲಿ ಮೇಲುವರ್ಗದವರಿಗಿದ್ದ ಯಾವ ಅವಕಾಶಗಳೂ ಕೆಳವರ್ಗದವರಿಗಿರಲಿಲ್ಲ. ಶೂದ್ರಾತಿ ಶೂದ್ರರೆನಿಸಿದ್ದ 'ಪಂಚಮ'ರು ಅಸ್ಪೃಶ್ಯತೆಗೆ ಒಳಗಾಗಿದ್ದರು. ದೀನ-ದಲಿತರಿಗೆ ದೇವಾಲಯ ಪ್ರವೇಶವಿರಲಿಲ್ಲ. ಅಂತರ್ಜಾತಿ ವಿವಾಹ ಅಪರಾಧವಾಗಿತ್ತು. ವಿಧವೆಯರು ಮತ್ತೆ ವಿವಾಹವಾಗುವಂತಿರಲಿಲ್ಲ. ಬಾಲ್ಯವಿವಾಹ ಪ್ರತಿಷ್ಠೆಯ ಪದ್ಧತಿಯಾಗಿತ್ತು. ಕೆಳವರ್ಗದವರಿಗೆ ಅಕ್ಷರಜ್ಞಾನರ ಅವಕಾಶವಿರಲಿಲ್ಲ.

ಇನ್ನು ವ್ಯಕ್ತಿಗತವಾಗಿಯೂ ಅಷ್ಟೆ. ವ್ಯಕ್ತಿ ತನ್ನ ಒಲವಿನ ವೃತ್ತಿಯನ್ನು ಆಯ್ಕೆ ಮಾಡಿಕೊಳ್ಳುವ ಕನಿಷ್ಠ ಸ್ವಾತಂತ್ರ್ಯವೂ ಇರಲಿಲ್ಲ. ಅದಕ್ಕೆ ವಂಶಪರಂಪರೆಯ ಅಂಕುಶವಿಡಲಾಗಿತ್ತು. ವ್ಯಕ್ತಿ ಶೂದ್ರನಾಗಿ ಹುಟ್ಟಿದರೆ ಅವನು ಸಾಯುವವರೆಗೂ ದಾಸ್ಯದಲ್ಲೇ ಇರಬೇಕಾಗಿತ್ತು. ದುಡಿಯದೆಯೇ ಒಡೆಯರೆನಿಸಿಕೊಳ್ಳುವ ಒಂದು ವರ್ಗವೇ ಇತ್ತು. ಸಾಮಾಜಿಕ ಸ್ತರದಲ್ಲಿ ಶ್ರಮಜೀವಿ ಅತ್ಯಂತ ಕನಿಷ್ಠನಾಗಿದ್ದ.

ಹೀಗೆ ಮಾನವತ್ವವನ್ನೇ ಅಣಕಿಸುವ, ಮಾನವ ಘನತೆಯನ್ನೇ ಅಪಮೌಲ್ಯಗೊಳಿಸುವ ನೂರಾರು ಅನಿಷ್ಟ ಪದ್ಧತಿಗಳು ಮತ್ತು ಸಾಂಪ್ರದಾಯಿಕ ಕಟ್ಟು-ಪಾಡುಗಳಿಂದ ಸಾಮಾನ್ಯ ಜನರು ಕ್ರೂರ ಶೋಷಣೆಗೆ, ಅಸಹ್ಯ ಅವಮಾನಕ್ಕೆ, ಅತೀವ ಮಾನಸಿಕ ಹಿಂಸೆಗೆ ಈಡಾಗಿದ್ದರು. ಇದೆಲ್ಲವೂ ದೈವ ನಿಯಾಮಕ ಮತ್ತು ಶಾಸ್ತ್ರ-ಪುರಾಣಗಳ ವಿಧಿ ಎಂದು ಹೇಳಲಾಗುತ್ತಿತ್ತು. ಒಟ್ಟಾರೆ, ಜನ ಸಮುದಾಯದ ಬದುಕು ಮೂಕವೇದನೆಯಾಗಿತ್ತು.

* ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
೧ನೇ ಮುಖ್ಯರಸ್ತೆ, ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು

೨. ಆಂದೋಲನ : ಸಂಪ್ರದಾಯದ ಮಡಿಲಲ್ಲೇ ಹುಟ್ಟಿದರೂ, ಅಜನ್ಮ ಪ್ರತಿಭೆ, ಸಂವೇದನಾಶೀಲತೆ, ಗಾಢವಾದ ಅಧ್ಯಯನ ಮತ್ತು ಲೋಕಾನುಭವದ ವೈಚಾರಿಕ ಪ್ರಜ್ಞೆಯಿದ್ದ ಬಸವಣ್ಣನವರು ಅಂದಿನ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಅವಲೋಕಿಸಿ, ಇಡೀ ವ್ಯವಸ್ಥೆಯ ಆಮೂಲಾಗ್ರ ಬದಲಾವಣೆಗೆ ಪರ್ಯಾಯ ಮಾರ್ಗ ಕಂಡುಕೊಳ್ಳಬೇಕೆಂದು ಸಂಕಲ್ಪ ಮಾಡಿದರು. ತಮ್ಮ ಸಂಕಲ್ಪವನ್ನು ಸಮಾನ ಮನಸ್ಕರೊಡನೆ ಸಮಾಲೋಚಿಸಿ, ಅದಕ್ಕೆ ಒಂದು ಸಾಮೂಹಿಕ ಆಂದೋಲನದ ಸ್ವರೂಪವನ್ನು ಕೊಟ್ಟರು.

ಸಮುದಾಯ ಜಾಗೃತಿಗಾಗಿ ತಮ್ಮ ಸಹ ಶರಣರೊಂದಿಗೆ ಸಂಘಟಿತವಾಗಿ ವೈದಿಕ ಧರ್ಮದ ಮತ್ತು ಜಾತಿ ಜಾಡ್ಯದ ವ್ಯವಸ್ಥೆಯನ್ನೇ ಧಿಕ್ಕರಿಸಿದರು. ಜನರಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಸಮಾನತೆಯನ್ನು ಘೋಷಿಸಿದರು. ಶತಮಾನಗಳ ಶಾಪದಂತಿದ್ದ ಅಸ್ಪೃಶ್ಯತೆಯ ನಿವಾರಣೆಗೆ ಕ್ರಮ ಕೈಗೊಂಡರು. ಪ್ರತಿಯೊಬ್ಬರೂ ದುಡಿದೇ ಉಣ್ಣಬೇಕೆಂಬ 'ಕಾಯಕ' ಸೂತ್ರದ ಮೂಲಕ ಆರ್ಥಿಕ ಸಮಾನತೆ ಮತ್ತು ಹಂಚಿ ಉಣ್ಣುವ 'ದಾಸೋಹ' ಸೂತ್ರದ ಮೂಲಕ ಸಹಬಾಳ್ವೆಗೆ ಅವಕಾಶ ಕಲ್ಪಿಸಿದರು. ಸ್ತ್ರೀ-ಪುರುಷರು ಸಮಾನವೆಂದು ಘೋಷಿಸಿದರು. ಎಲ್ಲಕ್ಕಿಂತ ಮಿಗಿಲಾಗಿ ಜನ ಸಮೂಹದಲ್ಲಿ ಆತ್ಮವಿಶ್ವಾಸ ಮತ್ತು ಸ್ವಾಭಿಮಾನದ ಗುಣಗಳನ್ನು ಮೈಗೂಡಿಸಿದರು.

೩. ಆಂದೋಲನದ ಪರಿಣಾಮ

- ವ್ಯಕ್ತಿಯ ಮನನಿಯಂತ್ರಣದ ಭಕ್ತಿ ಆತ್ಮೋನ್ನತಿಯ ಮೆಟ್ಟಿಲಾಯಿತು.
- ದೇವರು-ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಕಟಪಾಚರಣೆಗಳ ಬಯಲಾದವು.
- ಧರ್ಮವು ಅರ್ಥಹೀನ ಆಚರಣೆಗಳಿಂದ ಮುಕ್ತವಾಗಿ ಜೀವನ ವಿಧಾನವಾಯಿತು.
- ವರ್ಣ-ವರ್ಗಗಳಿಗೆ ಬದಲಾಗಿ ಮಾನವ ಸಮಾನತೆ ಸ್ಥಾಪಿತವಾಯಿತು.
- ಕೆಲವೇ ಜನರ ಸ್ವತ್ತಾಗಿದ್ದ ಸಂಸ್ಕೃತ ಭಾಷೆಯ ದಾಸ್ಯ ಕಳಚಿ ಜನಭಾಷೆಗೆ ಮನ್ನಣೆ ದೊರೆಯಿತು.
- ನಡೆ-ನುಡಿಗಳ ನಡುವಿನ ವಿಕೃತ ಕಂದರದ ನಿವಾರಣೆಯಾಯಿತು.
- ಅನುಭಾವದ ಔನ್ನತ್ಯದಂತೆ ಸಂಸಾರ ಜೀವನಕ್ಕೂ ಮಹತ್ವ ನೀಡಲಾಯಿತು.
- ಸ್ವರ್ಗ-ನರಕ, ಕರ್ಮಸಿದ್ಧಾಂತ, ಪುನರ್ಜನ್ಮಗಳ ಭ್ರಮೆ ನಿರಸನಗೊಂಡಿತು.
- ಶಾಸ್ತ್ರ-ಪುರಾಣಗಳ ಪ್ರಮಾಣ ಪ್ರತ್ಯಕ್ಷ ಪರೀಕ್ಷೆಗೆ ಗುರಿಯಾಯಿತು.
- ಅಂಧಶ್ರದ್ಧೆ ಮತ್ತು ಮೂಢ ಆಚರಣೆಗಳಿಗೆ ಕೊಡಲಿ ಪೆಟ್ಟು ಬಿದ್ದಿತು.
- ಶ್ರಮದ ದುಡಿಮೆ (ಕಾಯಕ) ಸಮಾನ ಹಂಚಿಕೆ (ದಾಸೋಹ)ಗಳು ಜೀವನ ಸೂತ್ರಗಳಾದವು.
- ವೃತ್ತಿಗಳಿಗೆ ಮೇಲು-ಕೀಳಿಲ್ಲದ ಸಮಾನ ಗೌರವ ದೊರಕಿತು.
- ಅವಮಾನವೀಯ ಅಸ್ಪೃಶ್ಯತೆಯ ನಿವಾರಣೆಗೆ ಅವಕಾಶವಾಯಿತು.
- ಅನ್ಯಾಯದ ವಿರುದ್ಧ ದನಿ ಎತ್ತುವ ಧೈರ್ಯ ಜನರಲ್ಲಿ ಮೂಡಿತು.
- ಧಾರ್ಮಿಕ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಗಳಿಗೆ ಮುಕ್ತ ಅವಕಾಶವಾಯಿತು.
- ಧಾರ್ಮಿಕವಾಗಿ ಏಕದೇವೋಪಾಸನೆ ಸಮರ್ಥನೀಯವಾಯಿತು.
- ಪೂಜಾರಿ-ಪುರೋಹಿತರ ಮಧ್ಯಸ್ಥಿಕೆಗೆ ಅವಕಾಶ ತಪ್ಪಿತು.
- ವ್ಯಕ್ತಿ-ವ್ಯಕ್ತಿಯ ಮಧ್ಯೆ ಸೌಹಾರ್ದ-ಸಹಕಾರ ಏರ್ಪಟ್ಟಿತು.
- ಬದುಕಿನ ಪೂರ್ಣತೆಗೆ ಅನುಭಾವದ ಅಗತ್ಯವನ್ನು ಮನಗಾಣುವಂತಾಯಿತು.
- ಒಟ್ಟಾರೆ ಸ್ಥಾವರ ವ್ಯವಸ್ಥೆಗೆ ಚಲನಶೀಲತೆ ದೊರೆಯಿತು.

೪. ಅನುಭವ ಮಂಟಪ : ಬಸವಣ್ಣನವರ ಈ ಹೊಸ ದೃಷ್ಟಿ ಧೋರಣೆಗಳಿಂದಾಗಿ ಶರಣರ ಆಂದೋಲನ ವ್ಯಾಪಕವಾಗಿ ಹರಡಿಕೊಂಡಿತು. ಜನರ ಲೌಕಿಕ ಬದುಕಿನ ನೆಮ್ಮದಿಗೆ, ಆಧ್ಯಾತ್ಮಿಕ ಅನುಭಾವದ ಆಧಾರವೂ ಇರಬೇಕೆಂಬುದನ್ನು ಮನಗಂಡು, ಲೌಕಿಕ ವಿಚಾರಗಳೊಡನೆ ಆಧ್ಯಾತ್ಮಿಕ ಚಿಂತನೆಯೂ ನಡೆಯಬೇಕೆಂದು 'ಅನುಭವ ಮಂಟಪ'ವೆಂಬ ಚಿಂತನ ವೇದಿಕೆಯನ್ನು ಸ್ಥಾಪಿಸಿದರು.

ಸ್ಥಾಪಿತ ವ್ಯವಸ್ಥೆಯ ವಿರುದ್ಧ ಮೊದಲ ಬಾರಿಗೆ ನಡೆದ ಶರಣರ ಆಂದೋಲನ ಸಮಾಜೋ-ಧಾರ್ಮಿಕ ಆಂದೋಲನವಷ್ಟೇ ಆಗದೆ, ಜನಮನ ಪರಿವರ್ತನೆಯ ವಚನಸಾಹಿತ್ಯ ಚಳುವಳಿಯೂ ಆಯಿತು. ವಚನ ಸಾಹಿತ್ಯ ವಿಶ್ವ ಸಾಹಿತ್ಯದಲ್ಲೇ ವಿಶಿಷ್ಟವಾದ ಅಪೂರ್ವ ಸಾಹಿತ್ಯ ಪ್ರಕಾರ. ಅನುಭವ ಮಂಟಪವು ವಚನ ಸಾಹಿತ್ಯ ಕಮ್ಮಟವೂ ಆಗಿತ್ತು.



ವಾಸ್ತವವಾಗಿ 'ಅನುಭವ ಮಂಟಪ' ಎನ್ನುವುದು ಕಟ್ಟಡದ ಪರಿಕಲ್ಪನೆಯಲ್ಲ. ಅದೊಂದು ಚಿಂತನ ವೇದಿಕೆ; ವಿಚಾರ ಗೋಷ್ಠಿ. ಶರಣ ವಿಚಾರಧಾರೆಯ ಸಮಾನ ಮನಸ್ಕರು ಅಲ್ಲಲ್ಲಿ ಅಂತಹ ಗೋಷ್ಠಿಗಳನ್ನು ನಡೆಸುತ್ತಿದ್ದರಾದರೂ, ಬಸವಣ್ಣನವರ ನಿವಾಸವೇ ಪ್ರಧಾನ ಕೇಂದ್ರವಾಗಿತ್ತು. ಅದಕ್ಕೇ ಅದನ್ನು 'ಮಹಾಮನೆ' ಎಂದು ಕರೆಯಲಾಗಿದೆ.

ಈ ಮಹಾಮನೆಯ 'ಅನುಭವ ಮಂಟಪ' ಮೇಲೆ ಹೇಳಿದಂತೆ ಅನುಭಾವಿಗಳ ಚಿಂತನ ಮತ್ತು ವಿಚಾರ ವಿನಿಮಯದ ವೇದಿಕೆಯಾಗಿತ್ತು. ಅಲ್ಲಿನ ಚರ್ಚೆ-ಚಿಂತನಗಳಲ್ಲಿ ಯಾವುದೇ ವರ್ಗ, ಲಿಂಗ ಭೇದವಿಲ್ಲದೆ ಸಮುದಾಯದ ಎಲ್ಲ ಸ್ತರಗಳ ಜನರೂ ಮುಕ್ತವಾಗಿ ಪಾಲುಗೊಳ್ಳಬಹುದಾಗಿತ್ತು. ಆತ್ಮಜ್ಞಾನಿ ಅಲ್ಲಮಪ್ರಭುವೇ ಅದರ ಅಧ್ಯಕ್ಷರಾಗಿದ್ದರು. ಅಧ್ಯಕ್ಷ ಸ್ಥಾನಕ್ಕೆ 'ಶೂನ್ಯ ಸಿಂಹಾಸನ' ಎನ್ನಲಾಯಿತು.

ಅನುಭವ ಮಂಟಪದ ಚರ್ಚೆಯಲ್ಲಿ ಪಾಲುಗೊಳ್ಳುತ್ತಿದ್ದ ನಾನಾ ಕಾಯಕದ ಜನರು ತಮ್ಮ ಅನುಭವವನ್ನು ಹಂಚಿಕೊಳ್ಳುತ್ತಿದ್ದರು; ತಮ್ಮ ಅನುಮಾನಗಳಿಗೆ ಪರಿಹಾರ ಪಡೆಯುತ್ತಿದ್ದರು. ಚರ್ಚೆಯಲ್ಲಿ ಅಂತಿಮವಾಗಿ ಮೂಡಿಬಂದ ಜೀವನನೀತಿ-ಸೂತ್ರಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳುತ್ತಿದ್ದರು. ಅಲ್ಲಿ ನಡೆಯುತ್ತಿದ್ದ ಗಂಭೀರ ಚಿಂತನದ ಕಲಾಪಗಳು ಒಬ್ಬರಿಂದ ಒಬ್ಬರಿಗೆ ತಿಳಿಯುತ್ತ ಕ್ರಮೇಣ, ವಿಸ್ತೃತ ಜನಜಾಗೃತಿಗೆ ನೆರವಾಗುತ್ತಿದ್ದವು. ಹಾಗಾಗಿ 'ಅನುಭವ ಮಂಟಪ'ವು ಒಂದು ಪ್ರಸಿದ್ಧ ಜ್ಞಾನಕೇಂದ್ರವಾಯಿತು. ವಿಶ್ವದ ನಾನಾ ಭಾಗಗಳ ಜ್ಞಾನಾಸಕ್ತರ ಆಕರ್ಷಣೆಯಾಯಿತು.

'ಅನುಭವ ಮಂಟಪ'ದ ಅನುಭಾವಿಗಳ ವಿಚಾರಧಾರೆಯ ಪ್ರಭಾವದಿಂದ ಜನಸಮುದಾಯದಲ್ಲಿ ಸೋಜಿಗದ ಪರಿವರ್ತನೆ ಉಂಟಾಯಿತು. ೧೨ನೆಯ ಶತಮಾನದ ಆಂದೋಲನ ಉಳಿದ ಹಿಂಸಾತ್ಮಕ ಚಳುವಳಿಗಂತಲ್ಲ. ಅದೊಂದು ಅಹಿಂಸಾತ್ಮಕ ಸಾತ್ವಿಕ ಚಳವಳಿ. ವ್ಯಕ್ತಿಶುದ್ಧಿ ಮತ್ತು ಸಮಾಜ ಶುದ್ಧಿ ಆ ಆಂದೋಲನದ ಮುಖ್ಯ ಉದ್ದೇಶವಾಗಿತ್ತು.

೫. ಇಂದಿನ ಪರಿಸ್ಥಿತಿ : ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶರಣರ ಕ್ರಾಂತಿಯ ವಿರುದ್ಧ ಸಂಪ್ರದಾಯವಾದಿಗಳು ಹಿಂಸಾಚಾರ ನಡೆಸಿದ್ದು, ಶರಣರು ಹಚ್ಚಿದ ಪ್ರಜ್ಞಾಜಾಗೃತಿಯ ಹಣತೆಯನ್ನು ಅಂದಿನ ಆಂದೋಲನಕ್ಕೆ ಬೆಂಕಿ ಇಟ್ಟ, ಸನಾತನ ಶಕ್ತಿಗಳ ಪರಂಪರೆಯೇ ನಂತರ, ಕೆಡವಿ ಅದರ ಎಣ್ಣೆ ಬತ್ತಿಗಳು ಚೆಲ್ಲಿಹೋಗುವಂತೆ ಮಾಡಿದ್ದು ಮತ್ತು ಶರಣರು ಯಾವ ಯಾವ ಅರ್ಥಹೀನ ಪದ್ಧತಿ-ಪರಂಪರೆಗಳ ವಿರುದ್ಧ ಹೋರಾಡಿದ್ದರೋ, ಆ ಎಲ್ಲ ಪದ್ಧತಿ-ಪರಂಪರೆಗಳನ್ನು ಮತ್ತೆ ಅಸ್ತಿತ್ವಕ್ಕೆ ತಂದದ್ದು ಇತಿಹಾಸದ ದಾಖಲೆ.

ಈ ಟಿಪ್ಪಣಿಯ ಪ್ರಸ್ತಾವನೆಯಲ್ಲಿ ಹೇಳಿರುವ ೧೨ನೆಯ ಶತಮಾನದ ಧಾರ್ಮಿಕ-ಸಾಮಾಜಿಕ-ರಾಜಕೀಯ ಅಸಂಗತಗಳು, ಅವ್ಯವಸ್ಥೆಗಳು ಇಂದೂ ಕೂಡ ಒಂದಲ್ಲ ಒಂದು ರೂಪದಲ್ಲಿ ನಮ್ಮನ್ನು ಕಾಡುತ್ತಿರುವುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಇಂದಿನ ಸನ್ನಿವೇಶದಲ್ಲಿ ಮಾನವ-ಮಾನವ ಸಂಬಂಧಗಳೇ ಕಡಿದುಹೋಗುತ್ತಿವೆ. ಹಿಂದೆಂದಿಗಿಂತ ಜಾತಿ-ಮತಗಳ ಜೀಕು ಹೆಚ್ಚಾಗಿದೆ. ಹಣ ಮತ್ತು ಅಧಿಕಾರದ ಹುಚ್ಚು ರೊಚ್ಚಿ ಗೆದ್ದಿದೆ. ದೇವರು-ಧರ್ಮಗಳ ಹೆಸರಿನಲ್ಲಿ ನಿರ್ಲಜ್ಜ ಶೋಷಣೆ ನಡೆಯುತ್ತಲೇ ಇದೆ. ರಾಜಶಾಹಿ ಹೋಗಿ ಜನಪ್ರಾತಿನಿಧ್ಯದ ಆಳ್ವಿಕೆ ಬಂದಿದ್ದರೂ ಜನಪ್ರತಿನಿಧಿಗಳಾಗಲೀ, ಜನರಾಗಲೀ ಸಂವಿಧಾನ ಬದ್ಧತೆಯನ್ನು ತೋರುತ್ತಿಲ್ಲ. ಸಂವಿಧಾನದಲ್ಲೇ ನಿಷೇಧಿಸಲ್ಪಟ್ಟಿರುವ ವರ್ಗ, ವರ್ಣ, ಲಿಂಗಭೇದಗಳನ್ನು ಪರೋಕ್ಷವಾಗಿ ಪೋಷಿಸುತ್ತಲೇ ಬರಲಾಗುತ್ತಿದೆ. ಆರ್ಥಿಕ ಸಮಾನತೆ ಎನ್ನುವುದು ಕೇವಲ ಘೋಷಣೆಯಾಗಿ ಉಳಿದಿದೆ. ಅಸ್ಪೃಶ್ಯತೆ ಎನ್ನುವುದು ವಸ್ತುತಃ ಮೂಲೋತ್ಪಾಟನೆಯಾಗಿಲ್ಲ. ನಾನಾ ಕಾರಣಗಳಿಂದಾಗಿ ಜನಸಮುದಾಯ-ಧರ್ಮಗುರುಗಳು - ರಾಜಕೀಯ ಪಕ್ಷಗಳಲ್ಲಿ ಪರಸ್ಪರ ಸಾಮರಸ್ಯವಿಲ್ಲ. ದೀನ-ದಲಿತರ ಶೋಷಣೆ ಮತ್ತು ಕಾನೂನು ಭಂಗಗಳು ನಡೆಯುತ್ತಲೇ ಇವೆ. ಎಲ್ಲೆಲ್ಲೂ ಭಯೋತ್ಪಾದನೆ, ಭ್ರಷ್ಟಾಚಾರ, ಸ್ವಜನ ಪಕ್ಷಪಾತಗಳು ಜನರನ್ನು ಹಿಂಡುತ್ತಲೇ ಇವೆ.

೬. ನೂತನ ಅನುಭವ ಮಂಟಪ : ಈ ಹಿನ್ನೆಲೆಯಲ್ಲಿ ಪರಿಕಲ್ಪಿಸಿದ ಯೋಜನೆಯೇ 'ನೂತನ ಅನುಭವ ಮಂಟಪ'. ಆಧುನಿಕ ಅಗತ್ಯಗಳಿಗೆ ಅನುಗುಣವಾಗಿ ಇಂದಿನ ಬಸವ ಕಲ್ಯಾಣದಲ್ಲಿ ನಿರ್ಮಿಸಲಾಗುವ ನೂತನ ಅನುಭವ ಮಂಟಪವು ಕ್ಷೇತ್ರತಜ್ಞರ ಸಮಾಲೋಚನಾ ಕೇಂದ್ರವಾಗಿ, ಜನಸಮುದಾಯದ ಸಮಸ್ಯೆಗಳ ಬಗೆಗೆ ಚರ್ಚೆ ನಡೆಸಿ ಪರಿಹಾರ ಕಂಡುಕೊಳ್ಳುವ ಸ್ಥಾನವಾಗಿ, ಹನ್ನೆರಡನೆಯ ಶತಮಾನದ ಶರಣರ ವಿಚಾರಧಾರೆಯ ಅನುಷ್ಠಾನದ ಪ್ರಾತ್ಯಕ್ಷಿಕ ತಾಣವಾಗಿ, ದೇಶ-ವಿದೇಶದ

ಆಸಕ್ತರ ಅಧ್ಯಯನ
ಜನಸಮುದಾಯದ
ಸಂದರ್ಭಗಳಲ್ಲಿ ಆಳ
ಮತ್ತು ಮಾರ್ಗದರ್ಶನ
ಇರಬೇಕೆಂಬುದು, ಈ
ಸರ್ಕಾರ ರಚಿಸಿದ್ದ ತಜ್ಞ

**೭. ಸಲಹೆಗಳು :**
ಗಮನದಲ್ಲಿಟ್ಟುಕೊಂಡು
ಇಂದಿನ ನಾಡಿನ
ಸಂಶೋಧಕರು, ಲೇ
ಜನಪ್ರತಿನಿಧಿಗಳು ಮತ್ತು
ಪ್ರಮುಖರೊಡನೆ ಸ
ಸಲ್ಲಿಸಿರುವ ಮೂಲ
'ಅನುಭವ ಮಂಟಪ'
'ಅನುಭವ ಮಂಟ
ಶತಮಾನದ ಐತಿಹ
ಸಂದರ್ಭವನ್ನು ಸ್ಮರಣ
ಪ್ರಧಾನ ಕಟ್ಟಡ ಮತ
ಎಂದಿರುವ ಆವರಣ
ಭಿತ್ತಿ ಚಿತ್ರ ಮತ್ತು
ದೃಶ್ಯೀಕರಿಸುವ ಬಗೆಗೆ
ಮಾಡಲಾಗಿದೆ:

೧. ಪ್ರೇಕ್ಷಕರು
ಪ್ರವೇಶಿಸುತ್ತಿದ್ದಂತೆ ಗ
ನೂತನ 'ಅನುಭವ
ವಿನ್ಯಾಸ, ನಿರ್ಮಾ
ಕ್ಷೇತ್ರಾವರಣದಲ್ಲಿ
ಕುರಿತಂತೆ ಸಂಕ್ಷಿಪ್ತ
ಫಲಕವಿರುವುದು.

೨. ಪ್ರಧಾನ ಕಟ
ಹಿಂಭಾಗದಲ್ಲಿ ೧
ಮಂಟಪ'ದ ಸಭೆಯ
ಚಿತ್ರದಲ್ಲಿ ತೋರಿಸುವು

೩. 'ಅನುಭವ
ಅಂತಸ್ತಿನಲ್ಲಿ ಶರಣರ
ಅಷ್ಟಾವರಣ, ಕಾ
ಪೂಜಾನುಷ್ಠಾನ –
ರೂಪದಲ್ಲಿ ಚಿತ್ರಿಸಿ, ಅ
ಕೊಡುವುದು.

# ಬಸವ ಚಿಂತನೆ

– ಕೋ.ರಂ. ಬಸ...

ಶಕ್ತಿವಿಶಿಷ್ಟನಾದ ಸೃಷ್ಟಿಕರ್ತ ಪರಶಿವನ ಚಿತ್‌ಶಕ್ತಿಯ ಸಹಸ್ರ ಸಹಸ್ರಾಂಶದಲ್ಲಿ ಅಣುಮಾತ್ರದಷ್ಟು ... ಆವಿಷ್ಕಾರಗೊಂಡು ಈ ಜಗತ್ತು ಎಲ್ಲ ಭೌತಿಕವಾಗಿ ಬೆಳೆದು ನಿಂತಿದೆ. ಆದರೆ ಈ ಭೌತಿಕ ಬೆಳವಣಿಗೆಯ ಜೊತೆ... ಅನೇಕ ಸಮಸ್ಯೆಗಳು ಬೃಹದಾಕಾರವಾಗಿ ತಲೆಎತ್ತಿ ನಿಂತಿವೆ. ಈ ಜಗತ್ತಿನೊಳಗೆ ಹಿಂಸೆ ಕ್ರೌರ್ಯಗಳು ತಾಂಡವ... ಅಶಾಂತಿ ಆವರಿಸಿದೆ. ಒಟ್ಟಾರೆ ವಿಶ್ವದ ಮನು ಕುಲವೇ ವಿನಾಶದ ಅಂಚಿನಲ್ಲಿದೆ. ಇಂಥ ಈ ಅಪಾಯದ ಯುಗ... ಜಗತ್ತಿನ ಪ್ರಾಜ್ಞರು ಚಿಂತಕರು ಪರಿಹಾರಕ್ಕಾಗಿ ಭಾರತದ ಕಡೆ ನೋಡುತ್ತಿದ್ದಾರೆ. ಇಂಥ ಸಮಯದಲ್ಲಿ ಜಗತ್ತಿನಲ್ಲಿ ... ಮಟ್ಟಿಗಾದರೂ ಶಾಂತಿ ನೆಲೆಗೊಳ್ಳಬೇಕಾದರೆ, ಸಮಸ್ಯೆಗಳು ಪರಿಹಾರ ಕಂಡುಕೊಳ್ಳಬೇಕಾದರೆ ಬಸವಣ್ಣನವರ ... ಮತ್ತು ಅನುಪಾಲನೆಗಳು ಅವಶ್ಯವಾಗಿ ಬೇಕಾಗಿವೆ. ಪ್ರಸ್ತುತವಾಗಿವೆ.

ಬಸವಣ್ಣನವರು ಈ ಜಗತ್ತು ಕಂಡೂ ಅರಿಯದ ಮಹಾ ಪ್ರವಾದಿ. ಜಗತ್ತಿನ ಯಾವ ಪ್ರವಾದಿಯಲ್ಲಿಯೂ ... ಬರದ ಬಹುಶ್ರುತ ಸಂಕೀರ್ಣ ವ್ಯಕ್ತಿತ್ವ ಬಹುಮುಖ ವ್ಯಕ್ತಿತ್ವ ಅವರದು. ಬಸವಣ್ಣ ಒಬ್ಬ ಶ್ರೇಷ್ಠ ತತ್ತ್ವಜ್ಞಾನಿ, ... ಅರ್ಥಶಾಸ್ತ್ರಜ್ಞ, ದೊಡ್ಡ ಸಮಾಜವಿಜ್ಞಾನಿ, ಮನಶ್ಶಾಸ್ತ್ರಜ್ಞ, ಪರಿಸರವಿಜ್ಞಾನಿ, ಪ್ರಕೃತಿ ವಿಜ್ಞಾನಿ, ಅಧ್ಯಾತ್ಮವಿಜ್ಞಾನಿ, ಧರ್ಮವಿಜ್ಞಾನಿ, ರಾಜಕೀಯ ಮುತ್ಸದ್ಧಿ, ಕಾಯಕ-ದಾಸೋಹಿ, ಭಾಷಾವಿಜ್ಞಾನಿ, ಲಿಪಿ ವಿಜ್ಞಾನಿ.

ಜಗತ್ತಿನ ಎಲ್ಲ ಅನರ್ಥಗಳಿಗೂ ಕಾರಣವೆಂದರೆ ಮನುಷ್ಯನಲ್ಲಿರುವ ಮೃಗೀಯತ್ವ ಅಥವಾ ... ಎಂಬುದನ್ನು ಬಸವಣ್ಣನವರು ಕಂಡುಕೊಂಡರು. ಇಂಥ ಮನುಷ್ಯನಿಗೆ ಮೊದಲು ಸಂಸ್ಕಾರವನ್ನು ಕೊಡಬೇಕು ... ಚಿಂತಿಸಿದರು. ಸಂಸ್ಕಾರಕೊಟ್ಟು ತನುಮನಭಾವಗಳನ್ನು ಶುದ್ಧ ಮಾಡಬೇಕೆಂದು ಬಗೆದು ಆ ಸಂಸ್ಕಾರಕ್ಕೆ ... ಕರೆದರು. ಕೊಟ್ಟ ಸಂಸ್ಕಾರವನ್ನು ಉಳಿಸಿಕೊಳ್ಳುವುದಕ್ಕಾಗಿ ಇಷ್ಟಲಿಂಗವನ್ನು ಧರಿಸಿ ಪೂಜಿಸುವ ಪದ್ಧತಿಯನ್ನು ... ಜಾರಿಗೆ ತಂದರು. ಸಂಸ್ಕಾರ ನೆಲೆಗೊಳ್ಳಲು ಅಷ್ಟಾವರಣವೆಂಬ ಬದುಕಿನ ಸುಂದರ ಚೌಕಟ್ಟನ್ನು ಪಂಚ... ಪಂಚಶೀಲಗಳನ್ನು ಷಟ್‌ಸ್ಥಲವೆಂಬ ಮೆಟ್ಟಲುಗಳನ್ನು ಗೊತ್ತುಪಡಿಸಿದರು. ಈ ಸಂಸ್ಕಾರವನ್ನು ಜಾತಿಮತ ... ಎಲ್ಲರಿಗೂ ಕೊಟ್ಟರು. ಈ ಲಿಂಗವೇ ಪರಶಿವನ ಪ್ರತಿರೂಪವೆಂದು ಹೇಳಿ ಇದನ್ನು ಪೂಜಿಸುವುದರಿಂದ ಎಲ್ಲೆಲ್ಲೂ ... ಕಾಣಬಹುದೆಂಬುದನ್ನು ಅರಿವಿಗೆ ತಂದು ಕೊಟ್ಟರು. ಅದರಿಂದ ಎಲ್ಲರೂ ನನ್ನವರೆಂಬ ಭಾವ ಕಣ್ತೆರೆಯಿತು. ... ಕೊಟ್ಟರು.

**ಇವನಾರವ ಇವನಾರವ ಇವನಾರವ ಎಂದೆನಿಸದಿರಯ್ಯಾ**
**ಇವನಮ್ಮವ ಇವನಮ್ಮವ ಇವನಮ್ಮವ ಎಂದೆನಿಸಯ್ಯಾ**
**ಕೂಡಲಸಂಗಮದೇವ ನಿಮ್ಮ ಮಗನೆಂದೆನಿಸಯ್ಯಾ**

ಇದೊಂದು ಸಂದೇಶ ಸಾಕು, ಎಲ್ಲರೂ ಒಂದಾಗಿ ಬಾಳಲು. ಇಲ್ಲಿ ಇವನಾರವ ಹಾಗೂ ಇವನಮ್ಮವ ... ಪದಗಳನ್ನು ಮೂರಾವರ್ತಿ ಹೇಳಿರುವಲ್ಲಿ ವಿಶೇಷವಾದ ಹಾಗೂ ವಿಶಾಲವಾದ ಅರ್ಥವಿದೆ. ಮೊದಲನೆಯ ... ಜಾತಿಕುಲ ಗೋತ್ರವೆನ್ನದೇ, ಎರಡನೆಯದಕ್ಕೆ ಆ ದೇಶ ಈ ದೇಶದವನೆನ್ನದೇ ಮೂರನೆಯದಕ್ಕೆ ಆ ವ್ಯಕ್ತಿ ಈ ವ್ಯಕ್ತಿ ... (ಆ ಆಶ್ರಮ ಈ ಆಶ್ರಮ) ಎಲ್ಲರೂ ನಮ್ಮವರೆಂಬ ಭಾವನೆ ಬಂದಾಗ ಎಲ್ಲರೂ ಕೂಡಲಸಂಗನ/ದೇವರ ... ಈವೊಂದು ಅಪರಿಚ್ಛಿನ್ನತೆಯ ಸಂದೇಶವನ್ನು ಸಮಾಜದಲ್ಲಿ ಜಾರಿಗೆ ತಂದರೆ ಸಾಕು ಯಾವ ದ್ವೇಷಾಸೂಯೆಗಳ... ವಿಶ್ವಭ್ರಾತೃತ್ವವನ್ನು ತೋರಬಹುದಾಗಿದೆ.

* ನಿವೃತ್ತ ಪ್ರಾಧ್ಯಾಪಕರು, 'ಮಧುಕೇಶ್ವರ ನಿಲಯ, ಶಿನೇ ಕ್ರಾಸ್, ಎಸ್.ಐ.ಟಿ. ಬಡಾವಣೆ, ...



ಮನುಷ್ಯ ಮನುಷ್ಯರ ನಡುವೆ ಆತ್ಮೀಯತೆಯನ್ನು ಬೆಸೆಯುವುದರಿಂದ ಅನೇಕ ಸಮಸ್ಯೆಗಳನ್ನು ಬಗೆಹರಿಸ ಬಹುದೆಂಬುದಾಗಿ ಬಸವಣ್ಣನವರು ಚಿಂತಿಸಿದರು. ಅದಕ್ಕಾಗಿ ರಕ್ತಸಂಬಂಧವಾಚಕಗಳನ್ನು ಸಂಬೋಧನಾ ವಿಭಕ್ತಿಯನ್ನಾಗಿ ಬಳಸಿದರು. ಬ್ರಾಹ್ಮಣ ಮೊದಲುಗೊಂಡು ಅಂತ್ಯಜನ ತನಕ ಎಲ್ಲರನ್ನು ಅಯ್ಯಾ, ಅಣ್ಣಾ, ಅಪ್ಪಾ, ಅಕ್ಕಾ, ತಾಯಿ ಎಂಬುದಾಗಿ ಪ್ರೀತಿಯಿಂದ ಕರೆದರು. ಅವರ ಹತ್ತಿರ ಹೋದರು. ಮೈದಡವಿದರು, ಅಪ್ಪಿದರು, ಒಪ್ಪಿದರು. ಒಬ್ಬ ಬಹುದೊಡ್ಡ ಸಮಾಜ ವಿಜ್ಞಾನಿ ಹಾಗೂ ಮನೋವಿಜ್ಞಾನಿಯಾದ ಬಸವಣ್ಣನಿಗೆ ಗೊತ್ತು; ಒಬ್ಬ ರಾಜ್ಯದ ಮಹಾಮಂತ್ರಿ, ಉತ್ತಮಕುಲದಲ್ಲಿ ಹುಟ್ಟಿದವ ತಾನೇ ನಡೆದು ಅವರು ವಾಸಿಸುವ ಕೇರಿಗೆ ಹೋಗಿ ಪ್ರೀತಿಯಿಂದ ಅಣ್ಣಾ ಅಪ್ಪಾ ಅಕ್ಕ ಎಂದು ಕರೆದು ಮುಟ್ಟಿ ಮಾತನಾಡಿಸಿದರೆ ಆಗುವ ಅದ್ಭುತ ಪರಿಣಾಮವನ್ನು ಬಲ್ಲವರಾಗಿದ್ದರು. ಅವರ ಧರ್ಮ ಧಮನಿಯಲ್ಲಾಗುವ ರೋಮಾಂಚನವನ್ನು ಬಲ್ಲವರಾಗಿದ್ದರು. 'ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ' ಎಂಬ ಸೂತ್ರವನ್ನು ಜಾರಿಗೆ ತಂದರು. ನಾವಾಡುವ ಪ್ರೀತಿಯ ಮಾತುಗಳೇ ಸರ್ವಸಂಪದಕ್ಕೆ ಮೂಲವೆಂಬುದನ್ನು ಮನದಟ್ಟು ಮಾಡಿಸಿದರು. ಮತ್ತು ನಾವು ಯಾವ ತಪಸ್ಸನ್ನು ಮಾಡಬೇಕಾಗಿಲ್ಲ. ಏಕೆಂದರೆ ಮೃದು ವಚನಂಗಳೇ ಜಪತಪಂಗಳಲ್ಲವೂ. ಅಷ್ಟೇ ಅಲ್ಲ ಸದಾಶಿವ ನೊಲುಮೆಗೂ ಮೃದುವಚನವೇ ಕಾರಣವೆಂಬುದನ್ನು ತಿಳಿ ಹೇಳಿದರು.

ಭಯೋತ್ಪಾದನೆ ಜಗತ್ತಿನ ಅತಿಭಯಂಕರವಾದ ಪಿಡುಗು/ಸಮಸ್ಯೆ. ಇದಕ್ಕೆ ಮೂಲಕಾರಣವನ್ನು ಬಸವಣ್ಣ ನವರು ಕಂಡುಹಿಡಿದು ಪರಿಹಾರೋಪಾಯವನ್ನೂ ಕಂಡುಕೊಂಡಿದ್ದರು. ಅವರ ಪ್ರಕಾರ ಭಯೋತ್ಪಾದನೆಗೆ ಕಾರಣವೆಂದರೆ – ಒಂದು ವರ್ಣವ್ಯವಸ್ಥೆ, ಎರಡನೆಯದು ಕಾಯಕ ವ್ಯವಸ್ಥೆ, ಮೂರನೆಯದು ಆರ್ಥಿಕ ವ್ಯವಸ್ಥೆ. ಈ ಮೂರನ್ನೂ ಸಮತೋಲನಗೊಳಿಸಿದರೆ ಭಯೋತ್ಪಾದನೆ ವ್ಯವಸ್ಥೆ ಹುಟ್ಟುವುದಿಲ್ಲವೆಂಬುದು ಅವರು ಕಂಡುಕೊಂಡ ಸತ್ಯ. ಹಾಗಾಗಿ ಈ ಮೂರರ ವಿರುದ್ಧ ಅವರು ಹೋರಾಟ ನಡೆಸಿದರು.

ಮೊದಲನೆಯದು ವರ್ಣವ್ಯವಸ್ಥೆ– ಶರಣರ ದೃಷ್ಟಿಯಲ್ಲಿ ವರ್ಣವೆಂದರೆ ವರ್ಣ್ಯತೇ ಪ್ರೇರ್ಯತೇ ಇತಿ ವರ್ಣಃ ಅಂದರೆ ಯಾವ ಕಸುಬನ್ನು ಅಥವಾ ಕಾರ್ಯವನ್ನು ಜೀವನ ನಿರ್ವಹಣೆಯಾಗಿ ವರ್ಣ್ಯತೇ– ಆರಿಸಿಕೊಳ್ಳುತ್ತಾನೆಯೋ ಸ್ವಭಾವಕ್ಕನುಗುಣವಾಗಿ ಆಯ್ಕೆ ಮಾಡಿಕೊಳ್ಳುತ್ತಾನೆಯೋ ಅದೇ ವರ್ಣ. 'ಓದಿ ಬ್ರಾಹ್ಮಣ ನಾದ, ಕಾದಿ ಕ್ಷತ್ರಿಯನಾದ, ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ....' ಎಂದು ವಚಿಸಿದ್ದಾರೆ. ಯಾರು ಬೇಕಾದರೂ ಬ್ರಾಹ್ಮಣನಾಗಬಹುದು ಯಾರು ಬೇಕಾದರೂ ಕ್ಷತ್ರಿಯನಾಗಬಹುದು. ಬ್ರಹ್ಮಜ್ಞಾನಿಯೇ ಬ್ರಾಹ್ಮಣ. 'ಬ್ರಹ್ಮ ಜಾನಾತೀತಿ ಬ್ರಾಹ್ಮಣಃ' ರಕ್ಷಣೆ ಮಾಡುವವನೇ ಕ್ಷತ್ರಿಯ. 'ಕ್ಷತಾತ್ ತ್ರಾಯತೇ ಇತಿ ಕ್ಷತ್ರಿಯಃ' ವ್ಯಾಪಾರ ಮಾಡುವವನೇ ವೈಶ್ಯ. ಅದರಂತೆ ಎಲ್ಲರ ದುಃಖವನ್ನು ಹೋಗಲಾಡಿಸುವವನೇ ಶೂದ್ರ. ಶು– ದುಃಖಂ, ದ್ರ–ದ್ರಾವಯತೀತಿ – ಶೂದ್ರಃ – ಹೀಗೆ. ಅಷ್ಟೇ ಅಲ್ಲ ಸಪ್ತಧಾತು ಸಮಂಪಿಂಡಂ ಸಮಯೋನಿ ಸಮುದ್ಭವಂ ಎಲ್ಲರ ದೇಹ ಬೆಳವಣಿಗೆಗೆ ಸಪ್ತಧಾತುವೇ ಕಾರಣ. ಹೀಗಿರುವಾಗ ವರ್ಣಾನಾಂ ಕಿಂ ಪ್ರಯೋಜನಂ? ಪಂಚಭೂತಗಳಲ್ಲಿ ಭೇದವಿಲ್ಲದಿರುವಾಗ ಮನುಷ್ಯ ಮನುಷ್ಯರ ನಡುವೆ ಭೇದವೇಕೆ? ಎಂಬುದು ಬಸವಣ್ಣ ನವರ ತರ್ಕ. 'ವ್ಯಾಸಬೋಯಿತಿಯ ಮಗ ಅಗಸ್ತ್ಯ ಕಬ್ಬಿಲ ದೂರ್ವಾಸ ಮಚ್ಚಿಗ...' ಆದ್ದರಿಂದ ಸಾಧನೆಯಿಂದ ದೊಡ್ಡವರಾಗ ಬೇಕೇ ಹೊರತು ಜಾತಿಯಿಂದಲ್ಲ, ಹುಟ್ಟಿನಿಂದಲ್ಲ. 'ಪ್ರಾಸಾದ ಶಿಖರ ಸ್ಥೋಽಪಿ ಕಾಕಃ ಕಿಂ ಗರುಡಾಯತೇ'? ಉಪ್ಪರಿಗೆ ಕಳಸದ ಮೇಲೆ ಕುಳಿತ ಮಾತ್ರಕ್ಕೆ ಕಾಗೆ ಗರುಡ ಎನಿಸಿಕೊಳ್ಳಲಾಗದು.

ಆದ್ದರಿಂದ ಜಗತ್ತಿನ ಮಾನವರೆಲ್ಲಾ ಶಿವನ ಅಂಶದಿಂದ ಹುಟ್ಟಿದವರೇ. ತಂದೆ ತಾಯಿಗಳ ಶುಕ್ಲರೇತಸ್ಸುಗಳು ಕೇವಲ ಪಿಂಡಕ್ಕೆ ಮಾತ್ರ ಕಾರಣ. ಚೈತನ್ಯ ಶಿವನದೇ. ಆದ್ದರಿಂದ ಎಲ್ಲರಲ್ಲಿಯೂ ಶಿವನಿದ್ದಾನೆ ಶಿವನಲ್ಲಿ ಎಲ್ಲವೂಯಿದೆಂಬ 'ಸಾಧಾರಣೀಕರಣವೃತ್ತಿ' ಎಲ್ಲ ರಲ್ಲಿಯೂ ಬಂತು ಎಂದರೆ ಯಾರು ಯಾರನ್ನೂ ದ್ವೇಷಿಸುವುದಿಲ್ಲ. 'ಸರ್ವಭೂತೇಷು ಚಾತ್ಮಾನಂ। ಆತ್ಮನಿಚ ಸರ್ವಭೂತಾನಿ' ಎಂಬ ಭಾವನೆ ಬಂತೆಂದರೆ ಜನಾಂಗ ಜನಾಂಗದ ದ್ವೇಷವೇ ಇರದು. ಇದು ಬಸವಣ್ಣನವರು ಕಂಡುಕೊಂಡ ಮಾರ್ಗ.

ಇನ್ನು ಭಯೋತ್ಪಾದನೆಗೆ ಎರಡನೆಯ ಕಾರಣ ವೆಂದರೆ ಅವರವರು ಮಾಡುವ ಕಸುಬು/ಕಾಯಕದಲ್ಲಿನ ಅಂತರ. ಮನುಷ್ಯ ಜೀವಿಕೆಗಾಗಿ ಯಾವುದೇ ವೃತ್ತಿಯನ್ನು ಕೈಗೊಂಡರೂ ಅದು ಶ್ರೇಷ್ಠವಾದ ಕಾಯಕವೇ. ಕಾಯಕದಲ್ಲಿ ತರತಮಭಾವ ಅಥವಾ ತಾರತಮ್ಯ ಕೂಡದು. ಓದಿಸುವ ಕಾಯಕ ಎಷ್ಟು ಶ್ರೇಷ್ಠವೋ ಒಬ್ಬ

ಆಸಕ್ತರ ಅಧ್ಯಯನ ಮತ್ತು ಸಂಶೋಧನ ಸ್ಥಳವಾಗಿ, ಜನಸಮುದಾಯದ ಜ್ಞಾನ ಕೇಂದ್ರವಾಗಿ, ಸಂದಿಗ್ಧ ಸಂದರ್ಭಗಳಲ್ಲಿ ಆಳುವ ಸರ್ಕಾರಗಳಿಗೆ ಸಲಹೆ ಮತ್ತು ಮಾರ್ಗದರ್ಶನ ನೀಡುವ ತಜ್ಞ ಕೇಂದ್ರವಾಗಿ ಇರಬೇಕೆಂಬುದು, ಈ ಸಂಬಂಧ ಕರ್ನಾಟಕ ರಾಜ್ಯ ಸರ್ಕಾರ ರಚಿಸಿದ್ದ ತಜ್ಞರ ಸಮಿತಿಯ ಆಶಯ.

**೭. ಸಲಹೆಗಳು :** ಇನ್ನು ಮೇಲ್ಕಂಡ ವಿಚಾರಗಳನ್ನೆಲ್ಲ ಗಮನದಲ್ಲಿಟ್ಟುಕೊಂಡು, ಐತಿಹಾಸಿಕ ಆಧಾರಗಳು ಮತ್ತು ಇಂದಿನ ನಾಡಿನ ನಾನಾ ಭಾಗದ ವಿದ್ವಾಂಸರು, ಸಂಶೋಧಕರು, ಲೇಖಕರು, ಧರ್ಮಗುರುಗಳು, ಜನಪ್ರತಿನಿಧಿಗಳು ಮತ್ತು ಕಲ್ಯಾಣ ಕರ್ನಾಟಕದ ಸ್ಥಳೀಯ ಪ್ರಮುಖರೊಡನೆ ಸಮಾಲೋಚಿಸಿ ತಜ್ಞರ ಸಮಿತಿ ಸಲ್ಲಿಸಿರುವ ಮೂಲ ವರದಿ ಮತ್ತು ಯೋಜಿತ ನೂತನ 'ಅನುಭವ ಮಂಟಪ'ದ ನಕ್ಷೆಯನ್ನು ಬದಲಾಯಿಸದೆ, 'ಅನುಭವ ಮಂಟಪ'ಕ್ಕೆ ಕಾರಣವಾದ ೧೨ನೆಯ ಶತಮಾನದ ಐತಿಹಾಸಿಕ ಮಹತ್ವದ ಕ್ರಾಂತಿಯ ಸಂದರ್ಭವನ್ನು ಸ್ಮರಣೆಗೆ ತರುವ ಕೆಲವು ಸಂಗತಿಗಳನ್ನು ಪ್ರಧಾನ ಕಟ್ಟಡ ಮತ್ತು ತಜ್ಞರ ಸಮಿತಿ 'ಮಹಾಮನೆ' ಎಂದಿರುವ ಆವರಣ (ಉದ್ಯಾನವನದ ಬಯಲು)ದಲ್ಲಿ ಭಿತ್ತಿ ಚಿತ್ರ ಮತ್ತು ಪ್ರತಿಮಾ ಮಾದರಿಗಳ ರೂಪದಲ್ಲಿ ದೃಶ್ಯೀಕರಿಸುವ ಬಗೆಗೆ ಕೆಳಗೆ ಕಂಡ ಅಂಶಗಳನ್ನು ಸಲಹೆ ಮಾಡಲಾಗಿದೆ:

೧. ಪ್ರೇಕ್ಷಕರು ಮಹಾಮನೆ ಆವರಣವನ್ನು ಪ್ರವೇಶಿಸುತ್ತಿದ್ದಂತೆ ಗಮನ ಸೆಳೆಯುವಂತಹ ಸ್ಥಳದಲ್ಲಿ ನೂತನ 'ಅನುಭವ ಮಂಟಪ'ದ ಪರಿಕಲ್ಪನೆ, ಯೋಜನೆ, ವಿನ್ಯಾಸ, ನಿರ್ಮಾಣ, ವೆಚ್ಚ-ಇತ್ಯಾದಿಗಳು ಮತ್ತು ಕ್ಷೇತ್ರಾವರಣದಲ್ಲಿ ಅಳವಡಿಸಿರುವ ಮಾದರಿಗಳನ್ನು ಕುರಿತಂತೆ ಸಂಕ್ಷಿಪ್ತ ಮಾಹಿತಿ ನೀಡುವ ಒಂದು ಬೃಹತ್ ಫಲಕವಿರುವುದು.

೨. ಪ್ರಧಾನ ಕಟ್ಟಡದ ಸಭಾಂಗಣದಲ್ಲಿ ವೇದಿಕೆಯ ಹಿಂಭಾಗದಲ್ಲಿ ೧೨ನೇ ಶತಮಾನದ 'ಅನುಭವ ಮಂಟಪ'ದ ಸಭೆಯ ದೃಶ್ಯವನ್ನು (ಹಿಂಫಲಕ) ವರ್ಣ ಚಿತ್ರದಲ್ಲಿ ತೋರಿಸುವುದು.

೩. 'ಅನುಭವ ಮಂಟಪ' ಕಟ್ಟಡದ ಒಂದು ಅಂತಸ್ತಿನಲ್ಲಿ ಶರಣರ ಷಟ್‌ಸ್ಥಲ, ಪಂಚಾಚಾರ ಮತ್ತು ಅಷ್ಟಾವರಣ, ಕಾಯಕ, ದಾಸೋಹ, ಲಿಂಗ ಪೂಜಾನುಷ್ಠಾನ - ಈ ತಾತ್ವಿಕ ಸೂತ್ರಗಳನ್ನು ಗ್ರಾಫಿಕ್ ರೂಪದಲ್ಲಿ ಚಿತ್ರಿಸಿ, ಆಯಾ ವಿಷಯದ ಸಂಕ್ಷಿಪ್ತ ನಿರೂಪಣೆ ಕೊಡುವುದು.

೪. ಕಟ್ಟಡದ ಇನ್ನೊಂದು ಅಂತಸ್ತಿನಲ್ಲಿ ಶರಣರ ಕ್ರಾಂತಿಗೆ ಸಂಬಂಧಿಸಿದ ಮತ್ತು ಅನುಭವ ಮಂಟಪದ ಕೆಲವು ಪ್ರಮುಖ ಸಂದರ್ಭಗಳನ್ನು (ಉದಾ: ಬಸವಣ್ಣನವರು ಅಲ್ಲಮ ಪ್ರಭುವನ್ನು ಅನುಭವ ಮಂಟಪಕ್ಕೆ ಬರಮಾಡಿಕೊಳ್ಳುವುದು, ಸಿದ್ಧರಾಮ, ಚನ್ನಬಸವಣ್ಣ, ಅಕ್ಕಮಹಾದೇವಿ, ಮಡಿವಾಳ ಮಾಚಿದೇವ ಮೊದಲಾದವರು ಸಭೆಯಲ್ಲಿ ಮಾತನಾಡುತ್ತಿರುವುದು ಇತ್ಯಾದಿ) ಭಿತ್ತಿ ಚಿತ್ರಗಳಲ್ಲಿ (ತೈಲವರ್ಣ) ತೋರಿಸುವುದು.

ಬಸವಣ್ಣ-ಹರಳಯ್ಯ ಭೇಟಿ, ಹರಳಯ್ಯ-ಮಧುವರಸರ ಮಕ್ಕಳ ವಿವಾಹ, ಸಂಪ್ರದಾಯವಾದಿಗಳು, ಬಿಜ್ಜಳನಲ್ಲಿ ದೂರುವುದು, ಬಿಜ್ಜಳನು ಶಿಕ್ಷೆ ಘೋಷಿಸುವುದು, ಎಳಹೂಟೆ ಶಿಕ್ಷೆ, ಬಿಜ್ಜಳ-ಬಸವಣ್ಣನವರ ಸಂವಾದ, ಅರಮನೆಯಿಂದ ಬಸವಣ್ಣನ ನಿರ್ಗಮನ, ಕೂಡಲ ಸಂಗಮಕ್ಕೆ ಪ್ರಯಾಣ, ಶರಣರು ಮತ್ತು ಸಂಪ್ರದಾಯವಾದಿಗಳ ನಡುವೆ ಕದನ, ಶರಣರು ವಚನಕಟ್ಟುಗಳೊಂದಿಗೆ ಚದುರುವುದು, ಕೆಲವರು ಉಳವಿ ಸೇರುವುದು, ಶ್ರೀಶೈಲದ ಕದಳಿವನದಲ್ಲಿ ಅಕ್ಕಮಹಾದೇವಿ, ಕೂಡಲ ಸಂಗಮದಲ್ಲಿ ಬಸವಣ್ಣನವರ ಐಕ್ಯ, ಫ.ಗು. ಹಳಕಟ್ಟಿ ಅವರ ವಚನಸಾಹಿತ್ಯ ಸಂಗ್ರಹ ಮೊದಲಾದ ಸಂದರ್ಭಗಳನ್ನು ಭಿತ್ತಿ ಚಿತ್ರಿಸುವುದು.

೫. ಉದ್ಯಾನದ ಬಯಲು ಪ್ರದೇಶವನ್ನು ಕಲಾತ್ಮಕವಾಗಿ ವಿನ್ಯಾಸಗೊಳಿಸಿ, ಶಾಶ್ವತ ಮರ-ಗಿಡಗಳು, ಹೂಬಳ್ಳಿಗಳೇ ಅಲ್ಲದೆ, ಸಣ್ಣ ಪ್ರಮಾಣದ ಕೊಳಗಳು ಮತ್ತು ಜಲಬುಗ್ಗೆಗಳನ್ನು ನಿರ್ಮಿಸುವುದು. ನೆಲಗಟ್ಟಿನ ಹಸಿರು ಹುಲ್ಲಿನ ಹಾಸಿನ ಮಧ್ಯೆ ಬಂಡೆಗಳು ಮತ್ತು ದಿಣ್ಣೆಗಳಿರುವುದು. ಪ್ರೇಕ್ಷಕರು ನಡೆದಾಡುವ ಹಾದಿಯ ಇಕ್ಕೆಲಗಳಲ್ಲಿ ಶರಣರ ಕಾಯಕನಿರತ ಮಾದರಿಗಳನ್ನು (ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ, ಮಾದಾರ ಧೂಳಯ್ಯ, ಜೇಡರ ದಾಸಿಮಯ್ಯ, ಒಕ್ಕಲಿಗ ಮುದ್ದಣ್ಣ, ತುರುಗಾಹಿ ರಾಮಣ್ಣ, ಬಾಚಿ ಬಸವಯ್ಯ, ಬೆರಣಿ ಅಣ್ಣಲದೇವಿ, ಕೊಟ್ಟಣದ ಸೋಮವ್ವೆ, ಭಂಡಾರಿ ಶಾಂತಯ್ಯ, ಮೇದರ ಕೇತಯ್ಯ, ನುಲಿಯ ಚಂದಯ್ಯ, ಡೋಹರ ಕಕ್ಕಯ್ಯ, ಕೃಷಿಕ ಘಟ್ಟಿವಾಳಯ್ಯ, ಕಟ್ಟಡ ಕೆಲಸದ ಭೀಮಯ್ಯ, ಬೀದಿ ಗುಡಿಸುವ ಸತ್ಯಕ್ಕ, ಗೊಲ್ಲರ ಮಸಣಯ್ಯ, ವೈದ್ಯ ಸಂಗಣ್ಣ, ಅಕ್ಕಸಾಲಿ ಹಾವಿನಹಾಳ ಕಲ್ಲಯ್ಯ, ಮೇದರ ಕೇತಯ್ಯ, ಗಾಣದ ಕನ್ನಯ್ಯ, ವೋಳಿಗೆ ಮಾರಯ್ಯ, ಬಹುರೂಪಿ ಚೌಡಯ್ಯ, ಮೊದಲಾದವರ ಕಾಯಕ ಪ್ರತಿಮೆಗಳನ್ನು ನಿರ್ಮಿಸಿ, ಅಲ್ಲಲ್ಲೇ ಆ ಶರಣರು ಮತ್ತು ಆಯಾ ಕಾಯಕದ ಹೆಸರಿನ ಕಿರುಫಲಕಗಳನ್ನಿಡುವುದು.



೬. ಪ್ರಧಾನ ಕಟ್ಟಡ ಅಥವಾ ಸೂಕ್ತವಾದ ಕಡೆ ನೆಲಮಾಳಿಗೆ ನಿರ್ಮಿಸಿ, ಅಲ್ಲಿ ೮-೧೦ ಪೂಜಾನುಷ್ಠಾನದ ಗವಿರೂಪದ ಅಂಕಣಗಳನ್ನು ನಿರ್ಮಿಸುವುದು. ಧ್ಯಾನ ಮತ್ತು ಯೋಗಗಳಿಗೂ ನೆಲಮಾಳಿಗೆಯನ್ನು ಬಳಸಬಹುದು.

೭. 'ಅನುಭವ ಮಂಟಪ'ದ ಸಭಾ ಭವನ, ಯೋಗ ಮತ್ತು ಧ್ಯಾನಮಂದಿರ ಭಾಗಗಳ ಹೊರತಾಗಿ ಇಡೀ ಮಹಾಮನೆ ಆವರಣದಲ್ಲಿ ಆಧುನಿಕ ಧ್ವನಿ-ಬೆಳಕಿನ ವ್ಯವಸ್ಥೆ ಮಾಡುವುದು.

೮. ಅನುಭವ ತತ್ತ್ವಸಿದ್ಧಾಂತದಂತಹ (ಕ್ರ.ಸಂ.೩) ಅಮೂರ್ತ ವಿಷಯಗಳು ಕೆಲಮಟ್ಟಿಗಾದರೂ ಸಾಧಕರು ಮತ್ತು ಪ್ರೇಕ್ಷಕರಿಗೆ ಅರ್ಥವಾಗುವಂತೆ ಆಧುನಿಕ ವಿದ್ಯುನ್ಮಾನ ತಂತ್ರದ, ಸ್ವಯಂಚಾಲಿತ ತಂತ್ರ ಮತ್ತು ಪಾರದರ್ಶಕ ಫಲಕ ರೂಪಗಳನ್ನು ಬಳಸುವುದು. ಸಾಧ್ಯವಿರುವ ಕಡೆ ವಿವರಣೆಯ ಧ್ವನಿಮುದ್ರಿಕೆ ಅಳವಡಿಸುವುದು. ಹಿನ್ನೆಲೆಯಲ್ಲಿ ಮೃದು ವಾದ್ಯಸಂಗೀತದ ದನಿ ಇರುವುದು.

ಈ ದೃಶ್ಯೀಕರಿಸುವ ಕೆಲಸ ಪೂರ್ಣವಾಗಿ ತಜ್ಞ ಚಿತ್ರಕಲಾವಿದರು ಮತ್ತು ವಿದ್ಯುನ್ಮಾನ ತಜ್ಞರಿಂದ ಆಗುವಂತಹದು. ಚಿತ್ರ ಅಥವಾ ಪ್ರತಿಮಾ ಮಾದರಿ ಯಾವುದಿದ್ದರೂ ಕೃತಕವೆಂಬಂತಿರದೆ ಸಹಜವೆಂಬಂತೆ ಕಾಣುವಂತಿರುವುದು ಅಗತ್ಯ. ದೇಶ-ವಿದೇಶಗಳ ಆಸಕ್ತರು ಮತ್ತು ಪ್ರವಾಸಿಗಳಿಗೂ ಒಂದು ಶೈಕ್ಷಣಿಕ ಮಹತ್ವದ ಕೇಂದ್ರವಾಗುವಂತೆ ಇಡೀ ಆವರಣವನ್ನು ಸಜ್ಜುಗೊಳಿಸ ಬೇಕಾಗುತ್ತದೆ.

ಮೇಲ್ಕಂಡ ಸಲಹೆಗಳನ್ನು ಕೃತಿರೂಪಕ್ಕೆ ಇಳಿಸಲು ಸಾಧ್ಯತೆ ಮತ್ತು ತಾಂತ್ರಿಕ ಅನುಕೂಲಗಳಿಗೆ ಅನುಗುಣವಾಗಿ ಸೂಕ್ತ ಬದಲಾವಣೆ ಮಾಡಿಕೊಳ್ಳಲು ಅವಕಾಶವಿದೆ.

**೮. ಸಮಾರೋಪ :** ಸುಮಾರು ೬೦೪ ಕೋಟಿ ರೂ. ಅಂದಾಜು ವೆಚ್ಚದ ಈ ಯೋಜನೆಗೆ ಕರ್ನಾಟಕ ಸರ್ಕಾರವು ೫೦೦ ಕೋಟಿ ರೂ.ಗಳನ್ನು ಮಂಜೂರು ಮಾಡಿದ್ದು ಸಹಜವಾಗಿಯೇ ಶರಣ ಸಾಹಿತ್ಯ ಮತ್ತು ಸಂಸ್ಕೃತಿಗಳ ಅಭಿಮಾನಿಗಳಿಗೆ ಹರ್ಷವುಂಟುಮಾಡಿದೆ. ಅತ್ಯಂತ ಮಹತ್ವದ ಈ ಯೋಜನೆ ಆದಷ್ಟು ಬೇಗ ಕಾರ್ಯಗತಗೊಳ್ಳಬೇಕೆಂಬುದೇ ನಮ್ಮೆಲ್ಲರ ಆಶಯ.

## ಭೈರಮಂಗಲ ವಿರೂಪಾಕ್ಷ ಒಡೆಯರ ಮಠದ ಪೂಜ್ಯ ಶ್ರೀ ಶ್ರೀ ವಿರೂಪಾಕ್ಷ ಸ್ವಾಮೀಜಿ ಅವರು ಲಿಂಗೈಕ್ಯ

ಬಿಡದಿ ಭೈರಮಂಗಲದ ಶ್ರೀ ವಿರೂಪಾಕ್ಷ ಒಡೆಯರ ಮಠದ ಪೀಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ವಿರೂಪಾಕ್ಷ ಸ್ವಾಮೀಜಿಯವರು ತಮ್ಮ ವಯೋಸಹಜವಾದ ಅನಾರೋಗ್ಯದಿಂದ ಮೇ ೯, ೨೦೨೧ ರಂದು ಶಿವೈಕ್ಯರಾದರು. ಅವರಿಗೆ ೮೮ ವರ್ಷವಾಗಿತ್ತು. ಪೂಜ್ಯರ ದಿವ್ಯಚೇತನಕ್ಕೆ ಸಿದ್ಧಗಂಗಾ ಭಕ್ತಿಪೂರ್ವಕವಾದ ಶ್ರದ್ಧೆಯನ್ನು ಅರ್ಪಿಸುತ್ತದೆ.

ಕೆಲವು ತಿಂಗಳುಗಳಿಂದ ಅನಾರೋಗ್ಯಕ್ಕೆ ತುತ್ತಾಗಿ ನೆಲಮಂಗಲದ ಪವಾಡ ಶ್ರೀ ಬಸವಣ್ಣದೇವರ ಮಠದಲ್ಲಿ ಬಸವಣ್ಣದೇವರ ಮಠದ ಪೀಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ಆರೈಕೆಯಲ್ಲಿದ್ದರು. ಪೂಜ್ಯ ಶ್ರೀ ಶ್ರೀ ವಿರೂಪಾಕ್ಷ ಸ್ವಾಮೀಜಿಯವರು ಶ್ರೀ ಸಿದ್ಧಗಂಗಾ ಮಠದಲ್ಲಿ ವ್ಯಾಸಂಗ ಮಾಡಿ ತ್ರಿವಿಧ ದಾಸೋಹಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಕೃಪಾಶೀರ್ವಾದ ಹಾಗೂ ಮಾರ್ಗದರ್ಶನದಲ್ಲಿ ಶಿಕ್ಷಣವನ್ನು ಮುಗಿಸಿ ಪೂಜ್ಯರ ಆದೇಶದಂತೆ ಶ್ರೀ ವಿರೂಪಾಕ್ಷ ಒಡೆಯರ ಮಠದ ಕ್ಷೇತ್ರಾಧ್ಯಕ್ಷರಾಗಿ ನೇಮಕಗೊಂಡು, ಕಳೆದ ಅನೇಕ ದಶಕಗಳಿಂದ ಮಠದ ಅಭಿವೃದ್ಧಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಪ್ರವಚನದ ಮೂಲಕ ಭಕ್ತರ ಅರಿವಿನ ದಿಗಂತವನ್ನು ವಿಸ್ತರಿಸಿದ್ದರು. ಮಠಕ್ಕೆ ಭೇಟಿ ನೀಡುವ ಭಕ್ತರಿಗೆ ದಾಸೋಹ ವ್ಯವಸ್ಥೆಯನ್ನು ಮಾಡಿದ್ದರು. ಮಠದ ಆರ್ಥಿಕ ಪರಿಸ್ಥಿಗೆ ಅನುಗುಣವಾಗಿ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿದ್ದರು. ಮಠದ ಸರ್ವಾಂಗೀಣ ಅಭಿವೃದ್ಧಿಗೆ ಅನೇಕ ಪ್ರಗತಿಪರ ಯೋಜನೆಗಳನ್ನು ಹಮ್ಮಿಕೊಂಡು ಕಾರ್ಯೋನ್ಮುಖರಾಗಿದ್ದರು. ಆದರೆ ತಾವು ಹಾಕಿಕೊಂಡ ಯೋಜನೆಗಳು ಸಾಕಾರವಾಗಲಿಲ್ಲ ಎಂಬ ಕೊರಗು ಅವರನ್ನು ಸದಾ ಕಾಡುತ್ತಿತ್ತು.

ಪರಮಪೂಜ್ಯ ಶ್ರೀಗಳವರ ಲಿಂಗದೇಹವನ್ನು ಬಸವಣ್ಣದೇವರ ಮಠದಲ್ಲಿ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಶ್ರೀ ಪವಾಡ ಬಸವಣ್ಣದೇವರ ಮಠದ ಶ್ರೀಗಳು ಸೇರಿದಂತೆ ಹರಗುರು ಚರಮೂರ್ತಿಗಳ ಉಪಸ್ಥಿತಿಯಲ್ಲಿ ಕೋವಿಡ್ ನಿಯಮದಂತೆ ಸಮಾಧಿಕ್ರಿಯೆ ಮೇ ೧೦ ರಂದು ನೆರವೇರಿಸಲಾಯಿತು.







ಲೇಖನ

# ಬಸವ ಚಿಂತನೆ

– ಕೋ.ರಂ. ಬಸವರಾಜು *

ಶಕ್ತಿವಿಶಿಷ್ಟನಾದ ಸೃಷ್ಟಿಕರ್ತ ಪರಶಿವನ ಚಿತ್‌ಶಕ್ತಿಯ ಸಹಸ್ರ ಸಹಸ್ರಾಂಶದಲ್ಲಿ ಅಣುಮಾತ್ರದಷ್ಟು ಸಂಶೋಧನೆ ಆವಿಷ್ಕಾರಗೊಂಡು ಈ ಜಗತ್ತು ಏನೆಲ್ಲ ಭೌತಿಕವಾಗಿ ಬೆಳೆದು ನಿಂತಿದೆ. ಆದರೆ ಈ ಭೌತಿಕ ಬೆಳವಣಿಗೆಯ ಜೊತೆಯಲ್ಲಿಯೇ ಅನೇಕ ಸಮಸ್ಯೆಗಳು ಬೃಹದಾಕಾರವಾಗಿ ತಲೆಎತ್ತಿ ನಿಂತಿವೆ. ಈ ಜಗತ್ತಿನೊಳಗೆ ಹಿಂಸೆ ಕ್ರೌರ್ಯಗಳು ತಾಂಡವವಾಡುತ್ತಿವೆ. ಅಶಾಂತಿ ಆವರಿಸಿದೆ. ಒಟ್ಟಾರೆ ವಿಶ್ವದ ಮನು ಕುಲವೇ ವಿನಾಶದ ಅಂಚಿನಲ್ಲಿದೆ. ಇಂಥ ಈ ಅಪಾಯದ ಯುಗದಲ್ಲಿ ಇಡೀ ಜಗತ್ತಿನ ಪ್ರಾಜ್ಞರು ಚಿಂತಕರು ಪರಿಹಾರಕ್ಕಾಗಿ ಭಾರತದ ಕಡೆ ನೋಡುತ್ತಿದ್ದಾರೆ. ಇಂಥ ಸಮಯದಲ್ಲಿ ಜಗತ್ತಿನಲ್ಲಿ ಕೊಂಚ ಮಟ್ಟಿಗಾದರೂ ಶಾಂತಿ ನೆಲೆಗೊಳ್ಳಬೇಕಾದರೆ, ಸಮಸ್ಯೆಗಳು ಪರಿಹಾರ ಕಂಡುಕೊಳ್ಳಬೇಕಾದರೆ ಬಸವಣ್ಣನವರ ಸಂದೇಶ ಮತ್ತು ಅನುಪಾಲನೆಗಳು ಅವಶ್ಯವಾಗಿ ಬೇಕಾಗಿವೆ. ಪ್ರಸ್ತುತವಾಗಿವೆ.

ಬಸವಣ್ಣನವರು ಈ ಜಗತ್ತು ಕಂಡೂ ಅರಿಯದ  ಮಹಾ ಪ್ರವಾದಿ. ಜಗತ್ತಿನ ಯಾವ ಪ್ರವಾದಿಯಲ್ಲಿಯೂ ಕಂಡು ಬರದ ಬಹುಶ್ರುತ ಸಂಕೀರ್ಣ ವ್ಯಕ್ತಿತ್ವ ಬಹುಮುಖ ವ್ಯಕ್ತಿತ್ವ ಅವರದು. ಬಸವಣ್ಣ ಒಬ್ಬ ಶ್ರೇಷ್ಠ ತತ್ತ್ವಜ್ಞಾನಿ, ಮಹಾನ್ ಅರ್ಥಶಾಸ್ತ್ರಜ್ಞ, ದೊಡ್ಡ ಸಮಾಜವಿಜ್ಞಾನಿ, ಮನಶ್ಶಾಸ್ತ್ರಜ್ಞ, ಪರಿಸರವಿಜ್ಞಾನಿ, ಪ್ರಕೃತಿ ವಿಜ್ಞಾನಿ, ಅಧ್ಯಾತ್ಮವಿಜ್ಞಾನಿ, ಶಿಕ್ಷಣತಜ್ಞ, ಧರ್ಮವಿಜ್ಞಾನಿ, ರಾಜಕೀಯ ಮುತ್ಸದ್ಧಿ, ಕಾಯಕ–ದಾಸೋಹಿ, ಭಾಷಾವಿಜ್ಞಾನಿ, ಲಿಪಿ ವಿಜ್ಞಾನಿ.

ಜಗತ್ತಿನ ಎಲ್ಲ ಅನರ್ಥಗಳಿಗೂ ಕಾರಣವೆಂದರೆ ಮನುಷ್ಯನಲ್ಲಿರುವ ಮೃಗೀಯತ್ವ ಅಥವಾ ಋಕ್ಷತ್ವವೇ ಎಂಬುದನ್ನು ಬಸವಣ್ಣನವರು ಕಂಡುಕೊಂಡರು. ಇಂಥ ಮನುಷ್ಯನಿಗೆ ಮೊದಲು ಸಂಸ್ಕಾರವನ್ನು ಕೊಡಬೇಕೆಂಬುದಾಗಿ ಚಿಂತಿಸಿದರು. ಸಂಸ್ಕಾರಕೊಟ್ಟು ತನುಮನಭಾವಗಳನ್ನು ಶುದ್ಧ ಮಾಡಬೇಕೆಂದು ಬಗೆದು ಆ ಸಂಸ್ಕಾರಕ್ಕೆ ದೀಕ್ಷೆ ಎಂದು ಕರೆದರು. ಕೊಟ್ಟ ಸಂಸ್ಕಾರವನ್ನು ಉಳಿಸಿಕೊಳ್ಳುವುದಕ್ಕಾಗಿ ಇಷ್ಟಲಿಂಗವನ್ನು ಧರಿಸಿ ಪೂಜಿಸುವ ಪದ್ಧತಿಯನ್ನು ಸಮಾಜದಲ್ಲಿ ಜಾರಿಗೆ ತಂದರು. ಸಂಸ್ಕಾರ ನೆಲೆಗೊಳ್ಳಲು ಅಷ್ಟಾವರಣವೆಂಬ ಬದುಕಿನ ಸುಂದರ ಚೌಕಟ್ಟನ್ನು ಪಂಚಾಚಾರವೆಂಬ ಪಂಚಶೀಲಗಳನ್ನು ಷಟ್‌ಸ್ಥಲವೆಂಬ ಮೆಟ್ಟಲುಗಳನ್ನು ಗೊತ್ತುಪಡಿಸಿದರು. ಈ ಸಂಸ್ಕಾರವನ್ನು ಜಾತಿಮತ ಭೇದವಿಲ್ಲದೆ ಎಲ್ಲರಿಗೂ ಕೊಟ್ಟರು. ಈ ಲಿಂಗವೇ ಪರಶಿವನ ಪ್ರತಿರೂಪವೆಂದು ಹೇಳಿ ಇದನ್ನು ಪೂಜಿಸುವುದರಿಂದ ಎಲ್ಲೆಲ್ಲೂ ಶಿವನನ್ನೇ ಕಾಣಬಹುದೆಂಬುದನ್ನು ಅರಿವಿಗೆ ತಂದು ಕೊಟ್ಟರು. ಅದರಿಂದ ಎಲ್ಲರೂ ನನ್ನವರೆಂಬ ಭಾವ ಕಣ್ತೆರೆಯಿತು. ಆಗ ಸಂದೇಶ ಕೊಟ್ಟರು.

ಇವನಾರವ ಇವನಾರವ ಇವನಾರವ ಎಂದೆನಿಸದಿರಯ್ಯಾ
ಇವನಮ್ಮವ ಇವನಮ್ಮವ ಇವನಮ್ಮವ ಎಂದೆನಿಸಯ್ಯಾ
ಕೂಡಲಸಂಗಮದೇವ ನಿಮ್ಮ ಮಗನೆಂದೆನಿಸಯ್ಯಾ

ಇದೊಂದು ಸಂದೇಶ ಸಾಕು, ಎಲ್ಲರೂ ಒಂದಾಗಿ ಬಾಳಲು. ಇಲ್ಲಿ ಇವನಾರವ ಹಾಗೂ ಇವನಮ್ಮವ ಎಂಬ ಪದಗಳನ್ನು ಮೂರಾವರ್ತಿ ಹೇಳಿರುವಲ್ಲಿ ವಿಶೇಷವಾದ ಹಾಗೂ ವಿಶಾಲವಾದ ಅರ್ಥವಿದೆ. ಮೊದಲನೆಯ ಆವೃತ್ತಿಗೆ ಜಾತಿಕುಲ ಗೋತ್ರವೆನ್ನದೇ, ಎರಡನೆಯದಕ್ಕೆ ಆ ದೇಶ ಈ ದೇಶದವನೆನ್ನದೇ ಮೂರನೆಯದಕ್ಕೆ ಆ ವ್ಯಕ್ತಿ ಈ ವ್ಯಕ್ತಿ ಎನ್ನದೇ (ಆ ಆಶ್ರಮ ಈ ಆಶ್ರಮ) ಎಲ್ಲರೂ ನಮ್ಮವರೆಂಬ ಭಾವನೆ ಬಂದಾಗ ಎಲ್ಲರೂ ಕೂಡಲಸಂಗನ/ದೇವರ ಮಕ್ಕಳೇ. ಈವೊಂದು ಅಪರಿಚ್ಛಿನ್ನತೆಯ ಸಂದೇಶವನ್ನು ಸಮಾಜದಲ್ಲಿ ಜಾರಿಗೆ ತಂದರೆ ಸಾಕು ಯಾವ ದ್ವೇಷಾಸೂಯೆಗಳೂ ಇಲ್ಲದೆ ವಿಶ್ವಭ್ರಾತೃತ್ವವನ್ನು ತೋರಬಹುದಾಗಿದೆ.

* ನಿವೃತ್ತ ಪ್ರಾಧ್ಯಾಪಕರು, 'ಮಧುಕೇಶ್ವರ ನಿಲಯ, ೫ನೇ ಕ್ರಾಸ್, ಎಸ್.ಐ.ಟಿ. ಬಡಾವಣೆ, ತುಮಕೂರು.







ಮನುಷ್ಯ ಮನುಷ್ಯರ ನಡುವೆ ಆತ್ಮೀಯತೆಯನ್ನು ಬೆಸೆಯುವುದರಿಂದ ಅನೇಕ ಸಮಸ್ಯೆಗಳನ್ನು ಬಗೆಹರಿಸ ಬಹುದೆಂಬುದಾಗಿ ಬಸವಣ್ಣನವರು ಚಿಂತಿಸಿದರು. ಅದಕ್ಕಾಗಿ ರಕ್ತಸಂಬಂಧವಾಚಕಗಳನ್ನು ಸಂಬೋಧನಾ ವಿಭಕ್ತಿಯನ್ನಾಗಿ ಬಳಸಿದರು. ಬ್ರಾಹ್ಮಣ ಮೊದಲುಗೊಂಡು ಅಂತ್ಯಜನ ತನಕ ಎಲ್ಲರನ್ನು ಅಯ್ಯಾ, ಅಣ್ಣಾ, ಅಪ್ಪಾ, ಅಕ್ಕಾ, ತಾಯಿ ಎಂಬುದಾಗಿ ಪ್ರೀತಿಯಿಂದ ಕರೆದರು. ಅವರ ಹತ್ತಿರ ಹೋದರು. ಮೈದಡವಿದರು, ಅಪ್ಪಿದರು, ಒಪ್ಪಿದರು. ಒಬ್ಬ ಬಹುದೊಡ್ಡ ಸಮಾಜ ವಿಜ್ಞಾನಿ ಹಾಗೂ ಮನೋವಿಜ್ಞಾನಿಯಾದ ಬಸವಣ್ಣನಿಗೆ ಗೊತ್ತು; ಒಬ್ಬ ರಾಜ್ಯದ ಮಹಾಮಂತ್ರಿ, ಉತ್ತಮಕುಲದಲ್ಲಿ ಹುಟ್ಟಿದವ ತಾನೇ ನಡೆದು ಅವರು ವಾಸಿಸುವ ಕೇರಿಗೆ ಹೋಗಿ ಪ್ರೀತಿಯಿಂದ ಅಣ್ಣಾ ಅಪ್ಪಾ ಅಕ್ಕ ಎಂದು ಕರೆದು ಮುಟ್ಟಿ ಮಾತನಾಡಿಸಿದರೆ ಆಗುವ ಅದ್ಭುತ ಪರಿಣಾಮವನ್ನು ಬಲ್ಲವರಾಗಿದ್ದರು. ಅವರ ಧರ್ಮ ಧಮನಿಯಲ್ಲಾಗುವ ರೋಮಾಂಚನವನ್ನು ಬಲ್ಲವರಾಗಿದ್ದರು. 'ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ' ಎಂಬ ಸೂತ್ರವನ್ನು ಜಾರಿಗೆ ತಂದರು. ನಾವಾಡುವ ಪ್ರೀತಿಯ ಮಾತುಗಳೇ ಸರ್ವಸಂಪದಕ್ಕೆ ಮೂಲವೆಂಬುದನ್ನು ಮನದಟ್ಟು ಮಾಡಿಸಿದರು. ಮತ್ತು ನಾವು ಯಾವ ತಪಸ್ಸನ್ನು ಮಾಡಬೇಕಾಗಿಲ್ಲ. ಏಕೆಂದರೆ ಮೃದು ವಚನಂಗಳೇ ಜಪತಪಂಗಳೆಲ್ಲವೂ. ಅಷ್ಟೇ ಅಲ್ಲ ಸದಾಶಿವ ನೊಲುಮೆಗೂ ಮೃದುವಚನವೇ ಕಾರಣವೆಂಬುದನ್ನು ತಿಳಿ ಹೇಳಿದರು.

ಭಯೋತ್ಪಾದನೆ ಜಗತ್ತಿನ ಅತಿಭಯಂಕರವಾದ ಪಿಡುಗು/ಸಮಸ್ಯೆ. ಇದಕ್ಕೆ ಮೂಲಕಾರಣವನ್ನು ಬಸವಣ್ಣ ನವರು ಕಂಡುಹಿಡಿದು ಪರಿಹಾರೋಪಾಯವನ್ನೂ ಕಂಡುಕೊಂಡಿದ್ದರು. ಅವರ ಪ್ರಕಾರ ಭಯೋತ್ಪಾದನೆಗೆ ಕಾರಣವೆಂದರೆ – ಒಂದು ವರ್ಣವ್ಯವಸ್ಥೆ, ಎರಡನೆಯದು ಕಾಯಕ ವ್ಯವಸ್ಥೆ, ಮೂರನೆಯದು ಆರ್ಥಿಕ ವ್ಯವಸ್ಥೆ. ಈ ಮೂರನ್ನೂ ಸಮತೋಲನಗೊಳಿಸಿದರೆ ಭಯೋತ್ಪಾದನೆ ವ್ಯವಸ್ಥೆ ಹುಟ್ಟುವುದಿಲ್ಲವೆಂಬುದು ಅವರು ಕಂಡುಕೊಂಡ ಸತ್ಯ. ಹಾಗಾಗಿ ಈ ಮೂರರ ವಿರುದ್ಧ ಅವರು ಹೋರಾಟ ನಡೆಸಿದರು.

ಮೊದಲನೆಯದು ವರ್ಣವ್ಯವಸ್ಥೆ– ಶರಣರ ದೃಷ್ಟಿಯಲ್ಲಿ ವರ್ಣವೆಂದರೆ ವರ್ಣ್ಯತೇ ಪ್ರೇರ್ಯತೇ ಇತಿ ವರ್ಣಃ ಅಂದರೆ ಯಾವ ಕಸುಬನ್ನು ಅಥವಾ ಕಾರ್ಯವನ್ನು ಜೀವನ ನಿರ್ವಹಣೆಯಾಗಿ ವರ್ಣ್ಯತೇ– ಆರಿಸಿಕೊಳ್ಳುತ್ತಾನೆಯೋ ಸ್ವಭಾವಕ್ಕನುಗುಣವಾಗಿ ಆಯ್ಕೆ ಮಾಡಿಕೊಳ್ಳುತ್ತಾನೆಯೋ ಅದೇ ವರ್ಣ. 'ಓದಿ ಬ್ರಾಹ್ಮಣ ನಾದ, ಕಾದಿ ಕ್ಷತ್ರಿಯನಾದ, ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ....' ಎಂದು ವಚಿಸಿದ್ದಾರೆ. ಯಾರು ಬೇಕಾದರೂ ಬ್ರಾಹ್ಮಣನಾಗಬಹುದು ಯಾರು ಬೇಕಾದರೂ ಕ್ಷತ್ರಿಯನಾಗಬಹುದು. ಬ್ರಹ್ಮಜ್ಞಾನಿಯೇ ಬ್ರಾಹ್ಮಣ. 'ಬ್ರಹ್ಮ ಜಾನಾತೀತಿ ಬ್ರಾಹ್ಮಣಃ' ರಕ್ಷಣೆ ಮಾಡುವವನೇ ಕ್ಷತ್ರಿಯ. 'ಕ್ಷತಾತ್ ತ್ರಾಯತೇ ಇತಿ ಕ್ಷತ್ರಿಯಃ' ವ್ಯಾಪಾರ ಮಾಡುವವನೇ ವೈಶ್ಯ. ಅದರಂತೆ ಎಲ್ಲರ ದುಃಖವನ್ನು ಹೋಗಲಾಡಿಸುವವನೇ ಶೂದ್ರ. ಶು– ದುಃಖಂ, ದ್ರ–ದ್ರಾವಯತೀತಿ – ಶೂದ್ರಃ – ಹೀಗೆ. ಅಷ್ಟೇ ಅಲ್ಲ ಸಪ್ತಧಾತು ಸಮಂಪಿಂಡಂ ಸಮಯೋನಿ ಸಮುದ್ಭವಂ ಎಲ್ಲರ ದೇಹ ಬೆಳವಣಿಗೆಗೆ ಸಪ್ತಧಾತುವೇ ಕಾರಣ. ಹೀಗಿರುವಾಗ ವರ್ಣಾನಾಂ ಕಿಂ ಪ್ರಯೋಜನಂ? ಪಂಚಭೂತಗಳಲ್ಲಿ ಭೇದವಿಲ್ಲದಿರುವಾಗ ಮನುಷ್ಯ ಮನುಷ್ಯರ ನಡುವೆ ಭೇದವೇಕೆ? ಎಂಬುದು ಬಸವಣ್ಣ ನವರ ತರ್ಕ. 'ವ್ಯಾಸಬೋಯಿತಿಯ ಮಗ ಅಗಸ್ತ್ಯ ಕಬ್ಬಿಲ ದೂರ್ವಾಸ ಮಚ್ಚಿಗ...' ಆದ್ದರಿಂದ ಸಾಧನೆಯಿಂದ ದೊಡ್ಡವರಾಗ ಬೇಕೇ ಹೊರತು ಜಾತಿಯಿಂದಲ್ಲ, ಹುಟ್ಟಿನಿಂದಲ್ಲ. 'ಪ್ರಾಸಾದ ಶಿಖರ ಸ್ಥೋಽಪಿ ಕಾಕಃ ಕಿಂ ಗರುಡಾಯತೇ'? ಉಪ್ಪರಿಗೆ ಕಳಸದ ಮೇಲೆ ಕುಳಿತ ಮಾತ್ರಕ್ಕೆ ಕಾಗೆ ಗರುಡ ಎನಿಸಿಕೊಳ್ಳಲಾಗದು.

ಆದ್ದರಿಂದ ಜಗತ್ತಿನ ಮಾನವರೆಲ್ಲಾ ಶಿವನ ಅಂಶದಿಂದ ಹುಟ್ಟಿದವರೇ. ತಂದೆ ತಾಯಿಗಳ ಶುಕ್ಲರೇತಸ್ಸುಗಳು ಕೇವಲ ಪಿಂಡಕ್ಕೆ ಮಾತ್ರ ಕಾರಣ. ಚೈತನ್ಯ ಶಿವನದೇ. ಆದ್ದರಿಂದ ಎಲ್ಲರಲ್ಲಿಯೂ ಶಿವನಿದ್ದಾನೆ ಶಿವನಲ್ಲಿ ಎಲ್ಲವೂಯಿದೆಂಬ 'ಸಾಧಾರಣೀಕರಣವೃತ್ತಿ' ಎಲ್ಲ ರಲ್ಲಿಯೂ ಬಂತು ಎಂದರೆ ಯಾರು ಯಾರನ್ನೂ ದ್ವೇಷಿಸುವುದಿಲ್ಲ. 'ಸರ್ವಭೂತೇಷು ಚಾತ್ಮಾನಂ। ಆತ್ಮನಿಚ ಸರ್ವಭೂತಾನಿ' ಎಂಬ ಭಾವನೆ ಬಂತೆಂದರೆ ಜನಾಂಗ ಜನಾಂಗದ ದ್ವೇಷವೇ ಇರದು. ಇದು ಬಸವಣ್ಣನವರು ಕಂಡುಕೊಂಡ ಮಾರ್ಗ.

ಇನ್ನು ಭಯೋತ್ಪಾದನೆಗೆ ಎರಡನೆಯ ಕಾರಣ ವೆಂದರೆ ಅವರವರು ಮಾಡುವ ಕಸುಬು/ಕಾಯಕದಲ್ಲಿನ ಅಂತರ. ಮನುಷ್ಯ ಜೀವಿಕೆಗಾಗಿ ಯಾವುದೇ ವೃತ್ತಿಯನ್ನು ಕೈಗೊಂಡರೂ ಅದು ಶ್ರೇಷ್ಠವಾದ ಕಾಯಕವೇ. ಕಾಯಕದಲ್ಲಿ ತರತಮಭಾವ ಅಥವಾ ತಾರತಮ್ಯ ಕೂಡದು. ಓದಿಸುವ ಕಾಯಕ ಎಷ್ಟು ಶ್ರೇಷ್ಠವೋ ಒಬ್ಬ







ಕರ್ಮಚಾರಿಯ ವೃತ್ತಿಯೂ ಅಷ್ಟೇ ಶ್ರೇಷ್ಠ. ಎಲ್ಲ ವೃತ್ತಿಯನ್ನೂ ಎಲ್ಲಾ ಕಸುಬುದಾರರನ್ನೂ ಸಮಾನವಾಗಿ ಗೌರವವಾಗಿ ಕಾಣಬೇಕು. ಹಾಗೆ ಗೌರವಿಸಿದಾಗ ಎಲ್ಲರೂ ಎಲ್ಲರನ್ನೂ ಗೌರವಿಸಿದಂತಾಗುತ್ತದೆ. ಆಗ ಯಾವ ಭಯೋತ್ಪಾದನೆಯೂ ಇರದು. ಭಯೋತ್ಪಾದನೆಗೆ ಶರಣರು ಕಂಡುಕೊಂಡ ಮೂರನೆಯ ಕಾರಣವೆಂದರೆ ಆರ್ಥಿಕ ಅಸಮತೋಲನೆ, ಏರುಪೇರು. ಅದನ್ನು ಹೋಗಲಾಡಿಸಲು ಅಥವಾ ದೇಶದಲ್ಲಿ ಆರ್ಥಿಕ ಸಮಾನತೆಯನ್ನು ತರಲು ಅನೇಕ ಯೋಜನೆಗಳನ್ನು ರೂಪಿಸಿದರು. ೧. ಸ್ವಾವಲಂಬನೆ ೨. ಸರ್ವರಿಗೂ ಸಮಪಾಲು-ಸಮಬಾಳು. ೩. ಸಹಕಾರತತ್ತ್ವ ೪. ಅತಿ ಮುಖ್ಯವಾಗಿ ಕಾಯಕ-ದಾಸೋಹ. ಈ ಕಾಯಕ ದಾಸೋಹ ತತ್ತ್ವದಲ್ಲಿಯೇ ಅಸಂಗ್ರಹ ಅಪರಿಗ್ರಹಾದಿ ಎಲ್ಲ ಅಣುವ್ರತಗಳೂ ಅಡಗಿವೆ. ಈ ಕಾಯಕ ದಾಸೋಹಕ್ಕೆ ವಿಶೇಷವಾದ ಅಧ್ಯಾತ್ಮದ ನೆಲಗಟ್ಟನ್ನು ಒದಗಿಸಿದರು. ಕಾಯಕ ದಾಸೋಹವೆನ್ನುವುದು ಕೇವಲ ಜೀವಿಕೆಯ ವೃತ್ತಿಯಲ್ಲ. ಅದು ಅಧ್ಯಾತ್ಮ ಸಾಧನವೂ ಹೌದು. ಅಷ್ಟೇ ಅಲ್ಲ; ಪರಮಾತ್ಮನ ಸಾಕ್ಷಾತ್ಕಾರಕ್ಕೂ ಮೂಲವೂ ಹೌದು ಮತ್ತು ಗಳಿಕೆ ಬಳಕೆಗಳ ತಟ್ಟೆಗಳು ಸಮಾನಾಂತರ ವಾಗಿರಬೇಕು. ಏರುಪೇರಾಗಬಾರದು. ಹಾಗಾದಾಗಲೇ ಪ್ರಕೃತಿಯಲ್ಲಿ ಏರುಪೇರುಗಳುಂಟಾಗುತ್ತವೆ. ಅದನ್ನೇ ಸುಂದರವಾಗಿ ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ ಹರದಕುಳ್ಳಿರ್ದ ನಮ್ಮ ಮಹದೇವಸೆಟ್ಟಿ... ಎಂದು ಹೇಳಿದ್ದಾರೆ. ಈ ತಕ್ಕಡಿ ಬ್ಯಾಲೆಂಸಿಂಗ್ ಆಗಿರ ಬೇಕಾದರೆ ಗಳಿಕೆ/ ಕಾಯಕ ಸೂತ್ರ ಬದ್ಧವಾಗಿರಬೇಕು.

೧. ಹಾಗದ ಕಾಯವ ಮಾಡಿ ಹಣವಡ್ಡವ ತಾ ಎನ್ನಬಾರದು (ಮೂರು ಕಾಸಿನ ಕೆಲಸ ಮಾಡಿ ಆರು ಕಾಸು ಕೇಳಬಾರದು. ಶ್ರಮಕ್ಕೆ ತಕ್ಕ ಪ್ರತಿಫಲಾಪೇಕ್ಷೆ ಯಿರಬೇಕು)

೨. ದಾಯಗಾರಿಕೆಯಲ್ಲಿ ತಂದು ದಾಸೋಹ ಮಾಡಬಾರದು. ಬಿಟ್ಟಿ ಸಿಕ್ಕೀತೆಂದು ದಾಸೋಹ ಮಾಡಬಾರದು. ಲಕ್ಕಮ್ಮ ವಾಪಾಸ್ಸು ಅಕ್ಕಿ ಸುರಿಸಿದ್ದು, ಇತ್ಯಾದಿ.

೩. ಅಂದಂದಿನ ನೇಮದ ಕೂಲಿ ಅಂದಂದೇ ನಿತ್ಯನೇಮದಲ್ಲಿ ಸಂದಿರಬೇಕು. (ಆವೊತ್ತಿನ ಊಟವನ್ನು ಆವತ್ತೇ ಮಾಡುವಂತೆ ಆವೊತ್ತಿನ ಕಾಯಕವನ್ನು ಆವೊತ್ತೇ ಮಾಡಿ ಮುಗಿಸಬೇಕು)

೪. ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದದ್ದನ್ನು ಮಾತ್ರ ಲಿಂಗಜಂಗಮಕ್ಕೆ ಅರ್ಪಿಸಬೇಕೇ ಹೊರತು ದುರಾಸೆಯಿಂದ ಬಂದದ್ದು ಅನರ್ಪಿತ. (ಆಸೆಬಿಟ್ಟು ತನುಮನ ಭಾವಗಳ ಬಳಲಿಸಿ ಅರ್ಪಣಾ ಮನೋಭಾವನೆಯಿಂದ ದುಡಿಯಬೇಕು.)

೫. ಗುರುವಾಗಲಿ ಲಿಂಗವಾಗಲಿ ಜಂಗಮವಾಗಲಿ ಕಾಯಕ ಮಾಡಿಯೇ ಚರಸೇವೆ ಮಾಡಬೇಕು. (ದುಡಿಯದೇ ಊಟ ಮಾಡುವ ಅಥವಾ ಹಂಚುವ ಅಧಿಕಾರ ಯಾರಿಗೂ ಇರುವುದಿಲ್ಲ.) ಇದಕ್ಕೆ ಸತ್ಯಶುದ್ಧ ಕಾಯಕವೆನ್ನುವರು. ಸತ್ಯ-ಸತೇಃ ಹಿತಂ ಯತ್ ತತ್‌ಸತ್ಯಂ। ಸತೇಃ-ಸತ್ ಶಬ್ದವಾಚ್ಯನಾದ ಪರಮಾತ್ಮನಗೆ/ ಲಿಂಗಕ್ಕೆ ಹಿತಂ-ಮೆಚ್ಚುಗೆಯಾಗತಕ್ಕದ್ದು. ಲಿಂಗ ಮೆಚ್ಚಿ ಅಹುದಹುದೆನ್ನುವ ಕಾಯಕ-ಸತ್ಯಕಾಯಕ. ಶುದ್ಧವೆಂದರೆ ಆಶಾರಹಿತವಾದದ್ದು.

ಹೀಗೆ ಕಾಯಕ ದಾಸೋಹತತ್ತ್ವವನ್ನು ಜಾರಿಗೆ ತಂದುದರಿಂದ ಎಲ್ಲರೂ ದುಡಿದು ಎಲ್ಲರೂ ಉಣ್ಣುವ ವ್ಯವಸ್ಥೆ ಯುಂಟಾಯ್ತು. ಸಂಪತ್ತು ಒಂದೇ ಕಡೆ/ಒಬ್ಬ ವ್ಯಕ್ತಿಯಲ್ಲಿಯೇ ಶೇಖರಣೆಯಾಗುವುದು ತಪ್ಪಿತು. ದೇಶದಲ್ಲಿನ ಉತ್ಪಾದನೆ ಮತ್ತು ಆದಾಯ ದೇಶದಲ್ಲಿಯೇ ವಿತರಣೆಯಾಗಿ ಸಂಪತ್ತು ನೆಲೆ ನಿಲ್ಲುವಂತಾಯ್ತು. ಇದರಿಂದ ಇಲ್ಲದಿರುವವರು ಉಳ್ಳವರ ಮೇಲೆ ಆಕ್ರಮಣ ಮಾಡುವುದೂ ತಪ್ಪಿತು. ಭಯದ ಉತ್ಪಾದನೆಗೆ ಬದಲಾಗಿ ಆರ್ಥಿಕ ಉತ್ಪಾದನೆ ದೇಶದಲ್ಲಿ ಅಧಿಕವಾಯ್ತು. ದೇಶದಲ್ಲಿ ಭಿಕ್ಷುಕರಿಲ್ಲದಂತಾಯ್ತು.

ಈವೊತ್ತಿನ ಜಗತ್ತಿನ ಜನಾಂಗೀಯವಾದ ಅನೇಕ ಸಮಸ್ಯೆಗಳಿಗೆ ಧರ್ಮದ ನಿಜವಾದ ಸ್ವರೂಪ ಗೊತ್ತಿಲ್ಲದಿರುವುದೇ ಆಗಿದೆ. ಧರ್ಮದ ದೊಡ್ಡ ದೊಡ್ಡ ವ್ಯಾಖ್ಯಾನಗಳಿಗೆ ಜೋತುಬಿದ್ದು ಮಾನವ ಧರ್ಮವನ್ನು ಅರ್ಥ ಮಾಡಿಕೊಳ್ಳದೇ ಇದ್ದರು. ಮಾನವ ಧರ್ಮ ಎಂದರೆ ಬದುಕಿಗೆ ಬೇಕಾದ ಧರ್ಮ. ನಮ್ಮ ಶರಣರು ಇದನ್ನು 'ನಯುತವಾದ ಬದುಕಿನ ಸಂವಿಧಾನ' ಎಂದು ಕರೆದರು ಮತ್ತು ಈ ಧರ್ಮ ದಾಸೋಹ ಸಂಸ್ಕೃತಿಯುಳ್ಳ ಧರ್ಮ. ವ್ಯಕ್ತಿಯ ಅಭ್ಯುದಯ ಮತ್ತು ಶ್ರೇಯಸ್ಸುಗಳಿಗೆ ಕಾರಣವಾದ ಸದಾಚಾರವುಳ್ಳ ಧರ್ಮ. 'ಯತೋಽಭ್ಯುದಯ ನಿಶ್ರೇಯಸ ಸಿದ್ಧಿಃ ಸಧರ್ಮಃ' ಎಂಬುದು ಇದರ ವ್ಯಾಖ್ಯೆ. ಶ್ರೇಯಸ್ಸು ಪ್ರೇಯಸ್ಸು ಕೊಡುವುದೇ ಧರ್ಮ. ಈ ಶ್ರೇಯಸ್ಸು ಪ್ರೇಯಸ್ಸು







ಸರಳವಾದ ಸದಾಚಾರವುಳ್ಳ ಸಪ್ತಸೂತ್ರಗಳನ್ನು ಪಾಲಿಸುವುದರಿಂದ ಬರುತ್ತದೆ. ಇದನ್ನೇ ಶಿವಾನುಭವ ಶಾಸ್ತ್ರದಲ್ಲಿ

**ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾಕ್ಷಮಾ ।**
**ದಾನಂ ಪೂಜಾಜಪೋ ಧ್ಯಾನಂ ಇತಿ ಧರ್ಮಸ್ಯ ಸಂಗ್ರಹಃ॥**

ಇದನ್ನೇ ಕನ್ನಡಭಾಷೆಗೆ ಧಾರ್ಮಿಕ ಶಕ್ತಿಯನ್ನು ತಂದುಕೊಟ್ಟು ಬಸವಣ್ಣನವರು

'ಕಳಬೇಡ, ಕೊಲಬೇಡ........'ಎಂಬ ವಚನವನ್ನು ಹೇಳಿದ್ದಾರೆ. ಬಸವ ಧರ್ಮ ಮಾನವ ಸಂಸ್ಕೃತಿಯನ್ನು ಗೌರವಿಸುವ ಧರ್ಮ, ಮೊದಲು ಮಾನವನಾಗುವ ಧರ್ಮ.

'ಏನು ಬಂದಿರಿ ಹದುಳವಿದ್ದಿರಿ ಎಂದೊಡೆ....' ಎಂಬ ವಚನದಲ್ಲಿ ತಿಳಿಸಿದ್ದಾರೆ. ಬಸವಣ್ಣನವರು ಈ ಮಾನವ ಧರ್ಮಕ್ಕೆ ಮತ್ತೊಂದು ವಿಶೇಷ ವ್ಯಾಖ್ಯೆ ನೀಡಿದ್ದಾರೆ 'ಸಕಲ ಜೀವಾವಳಿಗೆ ಲೇಸನೇ ಬಯಸುವುದೇ ಧರ್ಮ', 'ದಯವೇ ಧರ್ಮದ ಮೂಲವೆಂಬುದು'. ಶರಣರು ಮಾಡಿದ ಧರ್ಮದ ದೊಡ್ಡ ಕೆಲಸವೆಂದರೆ- ದೇವರೇ ಸೃಷ್ಟಿಸಿದ ಪಂಚಭೂತಗಳಲ್ಲಿ ಭೇದವಿಲ್ಲ ದಿರುವಾಗ ಮನುಷ್ಯ ಮನುಷ್ಯರ ನಡುವೆ ಭೇದವಿಲ್ಲವೆಂಬ ತಿಳುವಳಿಕೆಯನ್ನು ಕೊಟ್ಟದ್ದು. ಅದಕ್ಕಾಗಿ ವಿಶಿಷ್ಟವಾದ ಪ್ರಕ್ರಿಯೆಯನ್ನು ಕೈಗೊಂಡದ್ದು-ಸಕಲ ಜೀವಾತ್ಮರಿಗೆ ಲೇಸನೇ ಬಯಸುವವನೇ ಕುಲಜನೆಂಬುದು' ಮತ್ತು

**ನೆಲನೊಂದೆ ಹೊಲಗೇರಿ ಶಿವಾಲಯಕೆ**
**ಜಲವೊಂದೆ ಶೌಚಾಚಮನಕೆ**
**ಕುಲವೊಂದೆ ತನ್ನ ತಾನರಿದವಂಗೆ**
**ಫಲವೊಂದೇ ಷಡ್‌ದರುಶನ ಮುಕ್ತಿಗೆ**
**ನಿಲವೊಂದೆ ಕೂಡಲಸಂಗಮದೇವ ನಿಮ್ಮರಿದವಂಗೆ ॥**

ಬಸವಧರ್ಮ/ಶರಣಧರ್ಮ ಸರ್ವ ಸಮಾನತೆಯ ಆಧಾರದ ಮೇಲೆ ಸಮಾಜವನ್ನು ಸುಧಾರಿಸಿತು. ಭಕ್ತ ಮೊದಲು ಅಂತ್ಯಜ ಕಡೆಯಾಗಿ ಭಕ್ತರಾದವರೆಲ್ಲರೂ ಒಂದೇ ಎಂದು ಸಾರಿತು. ಸಮಾಜದಲ್ಲಿ ಸ್ವಾವಲಂಬನೆ ಸ್ವತಂತ್ರಮನೋಭಾವನೆಗಳನ್ನು ಬೆಳೆಸುವುದಕ್ಕಾಗಿ ಕಾಯಕತತ್ತ್ವವನ್ನು ಕೊಟ್ಟಿತು. ದುಡಿಮೆಯ ಗೌರವವನ್ನು ಗುರುತಿಸಿತು. ಬದುಕಿಗೆ ಬೇಕಾದ ಸಕಲ ತತ್ತ್ವವನ್ನು ಕೊಟ್ಟಿತು. ಹೀಗೆ ಇಂಥ ಕ್ರಿಯಾಶೀಲವಾದ ಯೋಜನೆಗಳಿಂದ ಅನೇಕ ಸಮಸ್ಯೆಗಳನ್ನು ಪರಿಹಾರ ಮಾಡುವ ಉಪಾಯವನ್ನು ಕಂಡುಕೊಂಡಿತು. ಇದರಿಂದ ವಾಸ್ತವ ಜಗತ್ತು ಉದ್ಧಾರವಾಯಿತು. ಮಾನವನ ಇಹಲೋಕದ ಬದುಕು ಸೈತಾಯಿತು ಋಜುವಾಯ್ತು, ಹದವಾಯ್ತು. ಇಂಥ ಅಣ್ಣನವರ ಸಂದೇಶವನ್ನು ನಾವು ಇಂದು ಅಳವಡಿಸಿಕೊಳ್ಳುವುದರಿಂದ ಅನೇಕ ಸಮಸ್ಯೆಗಳನ್ನು ಪರಿಹರಿಸಬಹುದು.

ಶರಣಧರ್ಮ ಈ ಜಗತ್ತು ಎಷ್ಟು ಸುಂದರವೋ ಸತ್ಯವೋ ಈ ಸಂಸಾರವೂ ಅಷ್ಟೇ ಸತ್ಯಸಾರ ವುಳ್ಳದ್ದೆಂಬುದನ್ನು ತಿಳಿಸಿಕೊಟ್ಟಿತು. ಸಂಸಾರ ತ್ಯಾಜ್ಯವಲ್ಲ. ಸಂಸಾರದಲ್ಲಿದ್ದುಕೊಂಡೇ ಸಾಕ್ಷಾತ್ಕಾರವನ್ನು ಪಡೆಯ ಬಹುದು. ಸಂಸಾರಯೋಗಿಯಾಗಿದ್ದುಕೊಂಡು ಸನ್ಯಾಸಿ ಯಂತೆ ಮೋಕ್ಷ ಪಡೆಯಬಹುದು. 'ಸತಿಪತಿಗಳೊಂದಾದ ಭಕ್ತಿ ಶಿವಂಗೆ ಹಿತವಪ್ಪುದೆಂದು' ಅರುಹಿದವರು. ಈ ಸಂಸಾರ ಕಬ್ಬು ಇದ್ದಂತೆ. ಕಬ್ಬಿನ ಮೇಲಿನ ತುದಿಯನ್ನು ಮೆಲಿದರೆ ರಸಾಸ್ವಾದ ಸಿಗದು. ಬುಡಕ್ಕೆ ಬಂದಂತೆಲ್ಲಾ ರಸಭರಿತವಾಗಿರುತ್ತದೆ. ಹಾಗೆಯೇ ಸಂಸಾರವೂ. ಸಂಸಾರವನ್ನು ಕಬ್ಬಿನ ರಸಕ್ಕೆ ಪರಿವರ್ತಿಸಿಕೊಳ್ಳುವ ಲೋಕ ಶ್ರದ್ಧೆ ಮತ್ತು ನಿರ್ಲಿಪ್ತ ಪ್ರಜ್ಞೆಗಳು ಬೇಕಷ್ಟೆ. ತನು ಮನ ಧನಗಳನ್ನು ಗುರುಲಿಂಗ ಜಂಗಮಕ್ಕರ್ಪಿಸಿ ಅವುಗಳನ್ನು ಉದಾತ್ತೀಕರಿಸಿಕೊಳ್ಳುವುದರಿಂದ ಸಂಸಾರಸಾರ ಭೂತ ವೆನಿಸುತ್ತದೆ. ಈ ಜಗತ್ತಿನಲ್ಲಿ ಇದ್ದೂ ಬದ್ಧನಲ್ಲದಂತೆ ಸುಳಿದು ಸೂತಕಿಯುಲ್ಲದಂತೆ ಇರಬೇಕು. ಈ ಜಗದಲ್ಲಿಯೇ ಬೆಳೆದು ಜಗದಂತೇ ಇದ್ದು ಈ ಜಗವ ಗೆದ್ದು ಹೋಗಬೇಕು ಮುಂತಾಗಿ ಬೋಧಿಸಿದ್ದಾರೆ. ಇಂಥ ನಮ್ಮ ಬಸವಣ್ಣನವರ ಬೋಧೆ ಹಾಗೂ ಸಂದೇಶವನ್ನು ನಾವು ಇಂದು ಪಾಲಿಸಿದ್ದಾದರೆ ಆತ್ಮಹತ್ಯೆಯಂತಹ ಇಂದಿನ ಅನೇಕ ಸವಾಲುಗಳನ್ನು ತಡೆಗಟ್ಟಬಹುದಾಗಿದೆ.

ಅಪರಾಧ ಮಾಡಿದವರನ್ನು ತಿದ್ದಿ ಪರಿವರ್ತಿಸಲು ನಮ್ಮ ಶರಣರು ಒಂದು ವಿಶೇಷವಾದ ಮಾರ್ಗವನ್ನು ಕಂಡುಕೊಂಡಿದ್ದರು ಅದನ್ನು 'ಭೃತ್ಯಾಪರಾಧೋ ಸ್ವಾಮಿನೋ ದಂಡಃ' ಎಂದು ಕರೆದರು. ಹಾಗೆಂದರೆ ಒಬ್ಬ ಸೇವಕನಾಗಲಿ ಶಿಷ್ಯನಾಗಲೀ ಆಳಾಗಲೀ ಅನ್ಯರಾಗಲೀ ಯಾರೇ ತಪ್ಪು ಮಾಡಿದರೂ ತಪ್ಪು ಮಾಡಿದವರನ್ನು ಶಿಕ್ಷಿಸದೇ ಅವರು ಮಾಡಿದ ತಪ್ಪಿಗಾಗಿ ಒಡೆಯನಾದ ತಾನು ತನ್ನನ್ನು ಶಿಕ್ಷೆಗೆ ಗುರುಪಡಿಸಿಕೊಳ್ಳುವುದು. ಉದಾ: ಒಂದೂರಿನಲ್ಲಿ ಒಂದು ಕೇರಿಯ ಜನ ಪರಸ್ಪರ ಜಗಳ

ಹೊಡೆದಾಟ ಮಾಡಿಕೊಂಡಾಗ ಆವೂರಿನ ಮುಳ್ಳಾವಿಗೆ ಕಾಯಕದ ಜಂಗಮ ಆ ಓಣಿಗೆ ಹೋಗಿ ಅವರಿಗಾಗಿ ದಿನಗಟ್ಟಲೆ ಮುಳ್ಳಹಾವುಗೆ ಮೇಲೆ ನಿಂತುಕೊಳ್ಳುವನು. ಕಾಲಲ್ಲಿ ರಕ್ತ ಸುರಿಯಲಿ ಏನೇ ಆಗಲಿ ಕೆಳಗೆ ಇಳಿಯುತ್ತಿರಲಿಲ್ಲ. ಕೊನೆಗೆ ಅವರವರೇ ಸರಿಹೋಗಿ ಪರಸ್ಪರ ದ್ವೇಷಾಸೂಯೆ ಬಿಟ್ಟು ಪರಿವರ್ತನೆಯಾಗಿ ಬಂದು ತಪ್ಪೊಪ್ಪಿಗೆ ಹಾಕಿ ನಮಸ್ಕಾರ ಹಾಕಿದ ಮೇಲೆ ಕೆಳಗಿಳಿಯುತ್ತಿದ್ದರು. ಇದು ಅತ್ಯಂತ ಪರಿಣಾಮಕಾರಿಯಾದ ಪರಿವರ್ತನೆಯ ಪದ್ಧತಿ. ಇದನ್ನು ಬಸವಣ್ಣನವರು ಸಮಾಜವನ್ನು ತಿದ್ದುವಲ್ಲಿ ಯಶಸ್ವಿಯಾಗಿ ಬಳಸಿಕೊಂಡು ಅದಕ್ಕೆ 'ಆತ್ಮಶಿಕ್ಷಾರ್ಹ ಪದ್ಧತಿ' ಎಂದು ಕರೆದರು. ವ್ಯಕ್ತಿ ವ್ಯಕ್ತಿಗೂ ದೇಶ ಕಾಲಗಳ ಪರಿಚ್ಛಿನ್ನತೆಯಿದ್ದರೂ ಸುಧಾರಣೆಯ ಸೂತ್ರ ಪ್ರವಾದಿಗಳಲ್ಲಿ ಒಂದೇ ಎಳೆಯಂತೆ ಎಣೆದುಕೊಂಡಿರುತ್ತವೆಯಂತೆ. ಹಾಗಾಗಿ ಮಹಾತ್ಮ ಗಾಂಧಿಯವರ 'ಉಪವಾಸ ಸತ್ಯಾಗ್ರಹ'ದ ಮೇಲೂ ಪ್ರಭಾವ ಬೀರಿರಬಹುದೆ? ನಮ್ಮ ಬಸವಣ್ಣನವರು ಬಹುದೊಡ್ಡ ಮನಶ್ಶಾಸ್ತ್ರಜ್ಞರು. ಮನಸ್ಸನ್ನು ಚೆನ್ನಾಗಿ ವಿಶ್ಲೇಷಣೆ ಮಾಡಿದವರು. 'ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ; ಎಂಬುದನ್ನು ಬಲ್ಲವರು. ಅಷ್ಟೇ ಅಲ್ಲ ಮಾನವನ ಸರ್ವವಿಧವಾದ ಕೃತ್ಯಾಕೃತ್ಯಗಳಿಗೆ ಮನಸ್ಸೇ ಪ್ರೇರಕಕಾರಕವೆಂಬುದನ್ನು ಅರಿತವರಾಗಿದ್ದರು. ಮನಸ್ಸು ಶುದ್ಧ ಸಾತ್ವಿಕಗೊಳಿಸುವುದಕ್ಕೆ ಸಾತ್ವಿಕ ಆಹಾರ ಪದ್ಧತಿಯನ್ನು ಜಾರಿಗೆ ತಂದರು. ನಾವು ತಿನ್ನುವ ಆಹಾರದ ಸೂಕ್ಷ್ಮಭಾಗವೇ ಮನಸ್ಸಾಗುವುದರಿಂದ ತಾಮಸ ಆಹಾರ ತಿಂದರೆ ತಮೋಗುಣ ಪ್ರಧಾನವಾದ ಮನಸ್ಸೂ ರಾಜಸ ಆಹಾರದಿಂದ ರಜೋಗುಣ ಪ್ರಧಾನವಾದ ಮನಸ್ಸೂ ಸಾತ್ವಿಕ ಆಹಾರದಿಂದ ಸತ್ವಗುಣದಿಂದ ಕೂಡಿದ ಮನಸ್ಸೂ ಉಂಟಾಗುವುದು. ಅತಿನಿದ್ರೆ ಅತಿ ಆಲಸ್ಯದ ಮನಸ್ಸು ತಾಮಸಾಹಾರದಿಂದ ಬಂದರೆ ಇನ್ನೊಬ್ಬರನ್ನು ತುಳಿಯುವುದು ಇನ್ನೊಬ್ಬರ ಮೇಲೆ ಆಕ್ರಮಣ ಮಾಡುವುದು ರಾಜಸಿಕಾಹಾರದಿಂದ ಬರುತ್ತದೆ. ಸಾತ್ವಿಕಾಹಾರದಿಂದ ಪರೋಪಕಾರ ಭೂತಾನುಕಂಪೆ ಮುಂತಾದ ಗುಣಗಳು ಬರುತ್ತವೆ. ಭಗವದ್ಗೀತೆಯಲ್ಲಿಯೂ ಕೂಡ ಇಂಥ ಆಹಾರವು ತಾಮಸ ರಾಜಸ ಸಾತ್ವಿಕ ಎಂಬುದಾಗಿ ಪಟ್ಟೀಕರಿಸಿದೆ.

ಆದ್ದರಿಂದ ಮಾನವನು ಶುದ್ಧ ಸಾತ್ವಿಕ ಆಹಾರ ಪದ್ಧತಿಯನ್ನೇ ಅಳವಡಿಸಿಕೊಳ್ಳಬೇಕು. ಅಷ್ಟೇ ಅಲ್ಲ ಶುದ್ಧವಾದ ಆಹಾರ ಸೇವನೆಯಿಂದ ಶರೀರದ ಎಲ್ಲ ತತ್ತ್ವಗಳೂ ಶುದ್ಧಿಯಾಗುತ್ತವೆ.

**ಆಹಾರ ಶುದ್ಧೌ ತತ್ತ್ವಶುದ್ಧಿಃ ತತ್ತ್ವಶುದ್ಧೌ ಧ್ರುವಾ ಸ್ಮೃತಿಃ ।**
**ಸ್ಮೃತಿಲಾರ್ಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಃ ॥**

ಶುದ್ಧವಾದ ಆಹಾರ ಸೇವನೆಯಿಂದ ಶರೀರದ ಎಲ್ಲ ತತ್ತ್ವಗಳೂ ಪ್ರಾಣೇಂದ್ರಿಯಗಳು ಶುದ್ಧವಾಗುತ್ತವೆ. ಆ ತತ್ತ್ವಶುದ್ಧಿಯಿಂದ ಗುರುವಿನ ಉಪದೇಶವು ಸ್ಮೃತಿಗೆ ಬರುವುವು. ಆಗ ವಾಸನಾ ಗ್ರಂಥಿಗಳೆಲ್ಲವೂ ನಷ್ಟವಾಗಿ ಅಂಗೇಂದ್ರಿಯಗಳು ನಿರ್ಮಲವಾಗುವುವು. ಆಗ ಮನಸ್ಸು ಶಿವಜ್ಞಾನದಲ್ಲಿ ಪ್ರವರ್ತಿಸುವುದು.

ಇದನ್ನು ನಮ್ಮ ಶರಣರು ಇನ್ನೂ ಸುಂದರವಾಗಿ ಹೇಳಿದ್ದಾರೆ. ಸತ್ಯಶುದ್ಧ ಕಾಯಕದಿಂದ ಬಂದ ಶುದ್ಧ ಆಹಾರವನ್ನು ಗುರುಲಿಂಗ ಜಂಗಮಕ್ಕೆ ಅರ್ಪಿಸಿ ಪ್ರಸಾದವನ್ನಾಗಿ ಮಾಡಿಕೊಂಡು ಸ್ವೀಕರಿಸುವುದರಿಂದ ಮನಸ್ಸು ಪ್ರಸನ್ನವಾಗುತ್ತದೆ. ಇಂಥ ಪ್ರಸಾದ ಅಥವಾ ಪ್ರಸನ್ನವಾದ ಮನಸ್ಸೇ ಭಕ್ತಿ ಮುಕ್ತಿಗೆ ಮೂಲವಾಗುತ್ತದೆ. ಇಂಥ ಮನಸ್ಸಿನಲ್ಲಿ ಸತ್ ಆಲೋಚನೆಗಳು ಸತ್ ಸಂಕಲ್ಪಗಳು ಮೂಡುತ್ತವೆ. ಇಂಥ ಮನಸ್ಸುಗಳು ಕೂಡಿದರೆ ಸಮಾಜದಲ್ಲಿ ಗೊಂದಲಕ್ಕಾಗಲೀ ಅನರ್ಥಕ್ಕಾಗಲೀ ಅವಕಾಶವೇ ಇರುವುದಿಲ್ಲ.

ಸ್ತ್ರೀಸಬಲೀಕರಣ ಸ್ತ್ರೀಸ್ವಾತಂತ್ರ್ಯತೆ ಸ್ತ್ರೀಸಮಾನತೆ ಮುಂತಾದ ಸ್ತ್ರೀಪರ ಘೋಷಣೆಗಳು ೨೦ನೇ ಶತಮಾನದ ಉತ್ತರಾರ್ಧದಲ್ಲಿ ಕೇಳಿ ಬರುವ ಕೂಗುಗಳು. ನಿಜವಾದ ಸ್ತ್ರೀಪರವಾದ ಯೋಜನೆಗಳು ರೂಪಗೊಂಡು ಕ್ರಿಯಾಮುಖಿಯಾದದ್ದು ೧೨ನೇ ಶತಮಾನದಲ್ಲಿ ಬಸವಾದಿ ಶರಣರಿಂದ. ಅಂದೇ ಸ್ತ್ರೀಯರಿಗೆ ಧಾರ್ಮಿಕ, ಸಾಮಾಜಿಕ, ಆಧ್ಯಾತ್ಮಿಕ, ಶೈಕ್ಷಣಿಕ ಸ್ವಾತಂತ್ರ್ಯ ಸಮಾನತೆಗಳನ್ನು ನಮ್ಮ ಬಸವಣ್ಣನವರು ಕೊಟ್ಟಿದ್ದರು. ದೀಕ್ಷಾ ಸಂಸ್ಕಾರ ಪೂಜಾ ಸಂಸ್ಕಾರಕ್ಕೆ ಅಧಿಕಾರಿಗಳಾದರು. ಅನುಭಾವ ಮಂಟಪದಲ್ಲಿ ಚರ್ಚಿಸುವ, ವಾದಿಸುವ ಸ್ವಅಭಿಪ್ರಾಯವನ್ನು ಮಂಡಿಸುವ ಅಭಿವ್ಯಕ್ತಿ ಸ್ವಾತಂತ್ರ್ಯವಿತ್ತು. ನೂರಾರು ಮಂದಿ ಶರಣೆಯರು ಶಿಕ್ಷಣ ಪಡೆದು ವಚನ ರಚನೆಮಾಡುವಂಥ ಅವಕಾಶಗಳು ಲಭ್ಯವಾದುವು. ಕಾಯಕ ದಾಸೋಹದ ಕಲಿಗಳಾದರು. ಪತಿಯರನ್ನೇ ಎಚ್ಚರಿಸುವಂಥ ಪ್ರಜ್ಞಾವಂತರಾದರು. ಉದಾ: ಲಕ್ಕಮ್ಮ 'ಒಳಗೆ ಸುಳಿವ ಆತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ, ಹೆಣ್ಣು ಸಾಕ್ಷಾತ್ ಕಪಿಲಸಿದ್ಧ



ಮಲ್ಲಿಕಾರ್ಜುನ' ಎಂಬುದನ್ನು ಸಾರಿದರು. ಹೀಗೆ ಸ್ತ್ರೀ ಸಬಲೀಕರಣ ಸಮಾನತೆ ಕೊಟ್ಟು ಹೆಣ್ಣನ್ನು ಗೌರವಿಸುವ ಸಂಸ್ಕೃತಿಯನ್ನು ಮೆರೆದರು.

ಬಸವಣ್ಣನವರು ಮಾಡಿದ ಬಹುದೊಡ್ಡ ಕ್ರಾಂತಿ ಎಂದರೆ ಲಕ್ಷಾಂತರ ಜಂಗಮ ದೇವಾಲಯಗಳನ್ನು ಅಥವಾ ನಡೆದಾಡುವ ದೇವಾಲಯಗಳನ್ನು ಸೃಷ್ಟಿಮಾಡಿದ್ದು. ದೇಹವೇ ದೇವಾಲಯ ಎಂಬ ದೇಹೋ ದೇವಾಲಯ ಸಂಸ್ಕೃತಿಯನ್ನು ಹುಟ್ಟುಹಾಕಿದ್ದು. ದೇಹೋ ದೇವಾಲಯಃ ಪ್ರೋಕ್ತೋ ಜೀವೋದೇವಃ...ಮಹೇಶ್ವರಃ 'ನಾನು ಶುದ್ಧ ಸಂಸ್ಕಾರಿಗಳ ಹೃದಯದಲ್ಲಿ ವಿಶೇಷವಾಗಿ ನೆಲಸಿ ಪ್ರಕಾಶಿಸುತ್ತೇನೆ. ಅಥವಾ 'ಭಕ್ತಕಾಯೋ ಮಮಕಾಯಃ' ಎಂಬ ಪರಶಿವನ ಮಾತಿನಂತೆ ದೇಹಗಳನ್ನೇ ದೇವಾಲಯಗಳನ್ನಾಗಿ ಸಂಸ್ಕಾರದಿಂದ ಪರಿವರ್ತನೆ ಮಾಡಿ ತಮ್ಮೊಳಗೇ ಇರುವ ದೇವರನ್ನು ಕಂಡುಕೊಳ್ಳುವಂತೆ ಮಾಡಿದರು. ಅದಕ್ಕಾಗಿ ದೃಷ್ಟಿಯೋಗ/ಶಿವಯೋಗದಂತಹ ಸರಳಯೋಗವನ್ನು ಕಲಿಸಿದರು. ಹೀಗೆ ಪ್ರತಿಯೊಬ್ಬರ ದೇಹಗಳೂ ದೇವಾಲಯಗಳಾದಾಗ ಅಲ್ಲಿ ಶಾಂತಿ ಸಮಾಧಾನಗಳು ನೆಲೆಸಿದವು. ಇದರಿಂದ ಸಮಾಜದಲ್ಲಿ ಹಾಹಾಕಾರಕ್ಕಾಗಲೀ ಅತೃಪ್ತಿಗಾಗಲೀ ಅಶಾಂತಿಗಾಗಲೀ ಅವಕಾಶವೇ ಇರಲಿಲ್ಲ.

ಬಸವಣ್ಣನವರು ಇಂದಿನ ಜಾಗತಿಕ ಜಗತ್ತಿನ ಅನೇಕ ಸಮಸ್ಯೆಗಳಿಗೆ ಪರಿಹಾರೋಪಾಯ ಸೂಚಿಯನ್ನು ಸೂತ್ರಬದ್ಧವಾಗಿ ಅಂದೇ ಕೊಟ್ಟು ಹೋಗಿದ್ದಾರೆ.

- ಬಾಗಿದ ತಲೆ ಮುಗಿದ ಕೈಯಾಗಿರುವುದು.
- ಬಿದಿರದೆ ಬಿದಿರಿನಂತೆ ಸರ್ವರಿಗೆ ಉಪಕಾರಿಯಾಗಿರುವುದು.
- ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ ಎಂದು ನಡೆಯುವುದು.
- ದೇಹವನ್ನೇ ದೇಗುಲವನ್ನಾಗಿ ಪರಿವರ್ತಿಸಿಕೊಳ್ಳುವುದು.
- ಭೃತ್ಯಾಪರಾಧೋಸ್ವಾಮಿನೋದಂಡಃ ಎಂಬಂತೆ ಆತ್ಮಶಿಕ್ಷಾರ್ಹ ಪದ್ಧತಿಯ ಜಾರಿಗೆ ತರುವುದು.
- ಏಕೋದೇವನಲ್ಲಿ ನಿಷ್ಠೆ ಉಪಾಸನೆ ಬೆಳೆಸಿಕೊಳ್ಳುವುದು.
- ಸಾತ್ವಿಕ ಶುದ್ಧ ಆಹಾರ ಪದ್ಧತಿಯನ್ನು ಪಾಲಿಸುವುದು.
- ಕಾಯಕ ದಾಸೋಹ ಸಂಸ್ಕೃತಿಯನ್ನು ಬೆಳೆಸುವುದು.
- ಅಯ್ಯಾ, ಅಪ್ಪಾ, ಅಣ್ಣಾ, ಅಕ್ಕ ಎಂಬ ನುಡಿ ಸಂಸ್ಕೃತಿಯನ್ನು ಜಾರಿಗೆ ತರುವುದು.
- ಎಲ್ಲ ನಮ್ಮವರೆಂಬ ನಡೆ ಸಂಸ್ಕೃತಿಯನ್ನು ಪ್ರಸಾರ ಮಾಡುವುದು.
- ಸಕಲಜೀವಿಗಳನ್ನು ಕಾರುಣ್ಯತೆಕ್ಕೆಯಲ್ಲಿ ಅಪ್ಪೊಪ್ಪಿ ಮುದ್ದಾಡುವ ಸಂಸ್ಕೃತಿಯನ್ನು ಬೆಳೆಸುವುದು.
- ತನ್ನನ್ನು ಜಗದೊಳಗೆ ಜಗದೊಳಗೆ ತನ್ನನ್ನು ನೆರೆಕಾಣ್ಬ ಸಮಯೋಗವನ್ನು ಬೆಳೆಸುವುದು.
- ಸಕಲಜೀವಾವಳಿಗೆ ಲೇಸನೇ ಬಯಸುವುದೇ ಧರ್ಮವೆಂಬುದರ ಅರಿವು ಮೂಡಿಸುವುದು.
- ಒಂದು ದಿನವಾದಡಾಗಲಿ ಲೇಸಾಗಿಬದುಕುವ ಛಲಹಿಡಿವುದು.
- ಜಗದೊಳಗಿನ ಮಾನವರೆಲ್ಲರೂ ಒಂದೇ ಎಂಬ ಸಮತಾ ದರ್ಶನ ಇತ್ಯಾದಿ.

ಇವುಗಳನ್ನು ನಾವು ಅಳವಡಿಸಿಕೊಂಡದ್ದೇ ಆದರೆ ಭಯೋತ್ಪಾದನೆ ಮೊದಲುಗೊಂಡು ಯಾವ ಸಮಸ್ಯೆಯೂ ಇರುವುದಿಲ್ಲ.

## ಪತ್ರಿಕೆ ಕುರಿತು

ತಾವು ಗೌರವಾದರದೊಂದಿಗೆ ಕಳುಹಿಸುತ್ತಿರುವ ತಮ್ಮ ಪತ್ರಿಕೆ 'ಸಿದ್ಧಗಂಗಾ' (ಮಾಸಪತ್ರಿಕೆ), ವಿಜಯಪುರ ಜ್ಞಾನಯೋಗಾಶ್ರಮಕ್ಕೆ ನಿರಂತರವಾಗಿ ನಿಯಮಿತವಾಗಿ ಬರುತ್ತಿದೆ. ಆಶ್ರಮದ ಸಾಧಕರು, ಸನ್ಯಾಸಿಗಳು, ಸದ್ಭಕ್ತರು ಎಲ್ಲರೂ ಓದಿ ಸಂತಸ ಪಡುತ್ತಿದ್ದಾರೆ. ತಾವು ತಮ್ಮ ಪತ್ರಿಕೆಯ ಮೂಲಕ ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ, ಆಧ್ಯಾತ್ಮಿಕ ವಿಚಾರಗಳನ್ನು ಹೃದಯ ಸ್ಪರ್ಶಿಯಾಗಿ ಓದುಗರಿಗೆ ತಲುಪಿಸುವ ಮಹತ್ಕಾರ್ಯವನ್ನು ಮಾಡುತ್ತಿರುವಿರಿ. ತಮ್ಮ ಪತ್ರಿಕೆಯು ಉತ್ತರೋತ್ತರವಾಗಿ ಅಭಿವೃದ್ಧಿಯನ್ನು ಹೊಂದಲಿ ಎಂದು ಹಾರೈಸುತ್ತೇವೆ. ಪತ್ರಿಕಾ ಬಳಗದವರಿಗೆಲ್ಲ ಅನಂತಾನಂತ ಧನ್ಯವಾದಗಳು.

ಅಧ್ಯಕ್ಷರು
ಜ್ಞಾನಯೋಗಾಶ್ರಮ
ವಿಜಯಪುರ





ಶ್ರದ್ಧಾಂಜಲಿ

# ನಿಘಂಟು ತಜ್ಞ ಡಾ. ಜಿ. ವೆಂಕಟಸುಬ್ಬಯ್ಯನವರು

ಕನ್ನಡದ ಖ್ಯಾತ ನಿಘಂಟು ತಜ್ಞ, ಭಾಷಾಶಾಸ್ತ್ರಜ್ಞ, ಶ್ರೇಷ್ಠ ಬರಹಗಾರ, ವ್ಯಾಕರಣಕಾರ, ವಿಮರ್ಶಕ, ಪ್ರಸಿದ್ಧ ಸಂಶೋಧನಾಕಾರ, ಶತಾಯುಷಿ ಡಾ ಜಿ. ವೆಂಕಟಸುಬ್ಬಯ್ಯನವರು ಏಪ್ರಿಲ್ ೧೯ ರಂದು ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾಧಿಸುತ್ತದೆ. ಅವರಿಗೆ ೧೦೮ ವರ್ಷಗಳಾಗಿತ್ತು.

ಮಂಡ್ಯ ಜಿಲ್ಲೆ ಕೈಗೋನಹಳ್ಳಿಯಲ್ಲಿ ಆಗಸ್ಟ್ ೨೩, ೧೯೧೩ ರಲ್ಲಿ ಗಂಜಾಂ ತಿಮ್ಮಣ್ಣಯ್ಯ ಮತ್ತು ಶ್ರೀಮತಿ ಸುಬ್ಬಮ್ಮ ಅವರ ಸುಪುತ್ರರಾಗಿ ಜನಿಸಿದರು. ತಂದೆ ಸಂಸ್ಕೃತ ಹಾಗೂ ಕನ್ನಡ ವಿದ್ವಾಂಸರು. ಮೈಸೂರು ಅರಮನೆಯ ಆಸ್ಥಾನಿಕರು. ವಿದ್ವತ್ ತಂದೆಯಿಂದ ಬಂದ ಬಳುವಳಿ. ಹುಟ್ಟಿದೂರಿನಲ್ಲಿ ಪ್ರಾಥಮಿಕ ಶಿಕ್ಷಣ, ಬನ್ನೂರು ಮತ್ತು ಮಧುಗಿರಿಯಲ್ಲಿ ಮೆಟ್ರಿಕ್‌ವರೆಗಿನ ಶಿಕ್ಷಣ ನಡೆಯಿತು. ೧೯೩೭ ಮೈಸೂರು ವಿಶ್ವವಿದ್ಯಾಲಯದಿಂದ ಕನ್ನಡ ಸ್ನಾತಕೋತ್ತರ ಪದವಿ ಪಡೆದರು. ನಂತರ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರರಾಗಿ ವೃತ್ತಿಜೀವನ ಪ್ರಾರಂಭಿಸಿದ ಜಿ.ವಿ.ಯವರು, ನಂತರ ಮೂವತ್ತು ವರ್ಷಗಳ ಕಾಲ ಬೆಂಗಳೂರಿನ ವಿಜಯ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ, ಪ್ರಾಧ್ಯಾಪಕರಾಗಿ, ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿ ನಿವೃತ್ತರಾದರು.

**ವಿವಿಧ ಸಂಸ್ಥೆಗಳಲ್ಲಿ :** ಪ್ರೊ. ಜಿ.ವಿ.ಯವರು ಹಲವಾರು ಸಂಘ ಸಂಸ್ಥೆಗಳಲ್ಲಿ ಕ್ರಿಯಾಶೀಲರಾಗಿ ಕಾರ್ಯನಿರ್ವಹಿಸಿದರು. ಅವುಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಕನ್ನಡ ನುಡಿ ಪತ್ರಿಕೆಯ ಸಂಪಾದಕರಾಗಿ, ಕನ್ನಡ ವಿಶ್ವಕೋಶ ಸಮಿತಿಯ ಸದಸ್ಯರಾಗಿ, ಕನ್ನಡ-ಕನ್ನಡ ನಿಘಂಟಿನ ಪ್ರಧಾನ ಸಂಪಾದಕರಾಗಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದರು.

**ಕೃತಿಗಳು :** ಅರವತ್ತಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ರಚಿಸುವುದರ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆ ನೀಡಿದ್ದರು. ಅವುಗಳಲ್ಲಿ ಕನ್ನಡ-ಕನ್ನಡ ಸಂಕ್ಷಿಪ್ತ ನಿಘಂಟು, ಪತ್ರಿಕಾ ಪದಕೋಶ, ಎರವಲು ಪದಕೋಶ, ಕನ್ನಡ ನಿಘಂಟು ಪರಿಹಾರ, ಅನುಕಲ್ಪನೆ, ಕನ್ನಡ ಶಾಸನ ಪರಿಚಯ, ಕನ್ನಡ ಸಾಹಿತ್ಯ ಪರಿಷತ್ತು ನಡೆದು ಬಂದದಾರಿ, ಡಿ.ವಿ. ಗುಂಡಪ್ಪ, ಸಾಹಿತ್ಯ ಮತ್ತು ಶಿಕ್ಷಣ, ಇಣುಕು ನೋಟ, ಚಿಣ್ಣರ ಚಿತ್ರ ರಾಮಾಯಣ, ಸಿರಿಗನ್ನಡ ಸಾರಸ್ವತರು ಮುದ್ದಣ್ಣ ಭಂಡಾರ (ಎರಡು ಸಂಪುಟ) ಕರ್ನಾಟಕ ಏಕೀಕರಣ ಅನುಭವಗಳು, ಇತ್ಯಾದಿ.

**ಪ್ರಶಸ್ತಿಗಳು :** ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ಮಾಸ್ತಿ ಪ್ರಶಸ್ತಿ, ನಾಡೋಜ ಪುರಸ್ಕಾರ, ೭೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ಪಂಪ ಪ್ರಶಸ್ತಿ, ಪದ್ಮಶ್ರೀ ಪುರಸ್ಕಾರ ಸೇರಿದಂತೆ ಅನೇಕ ಪ್ರಶಸ್ತಿಗಳಿಗೆ ಭಾಜನರಾಗಿದ್ದರು. ಶ್ರೀಯುತರು ಸಿದ್ಧಗಂಗಾ ಮಾಸಪತ್ರಿಕೆಗೆ ಮೌಲಿಕ ಲೇಖನಗಳನ್ನು ನೀಡುವುದರ ಮೂಲಕ ಪತ್ರಿಕೆಯ ಮೌಲ್ಯವನ್ನು ಹೆಚ್ಚಿಸಿದ್ದರು.





ಅಭಿನಂದನೆ

# ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಡಾ. ಗೊ.ರು. ಚನ್ನಬಸಪ್ಪನವರು



ಹಿರಿಯ ಜಾನಪದ ವಿದ್ವಾಂಸರಾದ ಡಾ. ಗೊ.ರು. ಚನ್ನಬಸಪ್ಪ ಅವರಿಗೆ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷತೆಯ ಹೊಣೆಯನ್ನು ಮತ್ತೆ ಹೊರಿಸಿದ್ದು, ಇತ್ತೀಚೆಗೆ ಅಧಿಕಾರವನ್ನು ಸ್ವೀಕಾರ ಮಾಡಿದ ಡಾ. ಗೊ.ರು.ಚ. ಅವರಿಗೆ ಸಿದ್ಧಗಂಗಾ ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ.

ಮೇ ೧೮, ೧೯೩೦ ರಲ್ಲಿ ಚಿಕ್ಕಮಗಳೂರು ಜಿಲ್ಲೆ ತರೀಕೆರೆ ತಾಲ್ಲೂಕು ಗೊಂಡೇದಹಳ್ಳಿಯಲ್ಲಿ ಶರಣ ದಂಪತಿಗಳಾದ ಗಿರಿಗೌಡರ ರುದ್ರಪ್ಪ ಮತ್ತು ಶ್ರೀಮತಿ ಅಕ್ಕಮ್ಮ ಅವರ ಪುತ್ರ ರತ್ನವಾಗಿ ಜನಿಸಿದರು. ಶಿಕ್ಷಕರಾಗಿ ವೃತ್ತಿ ಜೀವನ ಆರಂಭಿಸಿದ ಗೊ.ರು.ಚ. ಅವರು ಸರ್ಕಾರದ ವಿವಿಧ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿ ಆರೋಗ್ಯ ಇಲಾಖೆಯಲ್ಲಿ ಪ್ರಕಟಣೆಗಳ ಸಂಪಾದಕರಾಗಿ, ಉಪನಿರ್ದೇಶಕರಾಗಿ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದರು.

ಕನ್ನಡ ಸಾಹಿತ್ಯ ಪರಿಷತ್ತಿನ ಜಾನಪದ ಸಮಿತಿಯ ಸಂಚಾಲಕರಾಗಿ, ಕಾರ್ಯದರ್ಶಿಯಾಗಿ, ಅಧ್ಯಕ್ಷರಾಗಿ ಹಲವಾರು ಪ್ರಗತಿಪರ ಯೋಜನೆಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅನುಷ್ಠಾನಗೊಳಿಸಿದ ಹೆಗ್ಗಳಿಕೆ. ಅವರ ಸೇವಾವಧಿಯಲ್ಲಿ ತಮಗೆ ದೊರೆಯಬೇಕಾಗಿದ್ದ ಯಾವುದೇ ಭತ್ಯವನ್ನೂ ಸ್ವೀಕರಿಸದೆ ಇತರರಿಗೆ ಮಾದರಿಯಾದರು.

'ಮಳೆ ನಿಂತರೂ ಮಳೆ ಹನಿ ಬಿಡದು' ಎಂಬ ನಾಣ್ಣುಡಿಯಂತೆ ಪರಿಷತ್ತಿನ ಅಧ್ಯಕ್ಷತೆಯಿಂದ ನಿವೃತ್ತರಾದ ಮೇಲೆ ಜಾನಪದ ಅಕಾಡೆಮಿಯ ಅಧ್ಯಕ್ಷರನ್ನಾಗಿ ಸರ್ಕಾರ ನೇಮಿಸಿತು. ಗೊ.ರು.ಚ. ಅವರು ಎಂದೂ ಅಧಿಕಾರಕ್ಕಾಗಿ ಆಸೆಪಟ್ಟವರಲ್ಲ. ಅವಕಾಶಗಳು ಅವರನ್ನು ಹುಡುಕಿಕೊಂಡು ಬಂದವು. ಜಾನಪದ ವಿಶ್ವವಿದ್ಯಾನಿಲಯದ ಕನಸನ್ನು ನನಸನ್ನಾಗಿಸುವ ಅವರ ಪ್ರಾಮಾಣಿಕ ಪ್ರಯತ್ನ ಫಲ ನೀಡಿ ಜಾನಪದ ವಿಶ್ವವಿದ್ಯಾಲಯ ಸ್ಥಾಪನೆಯಾಯಿತು. ಅಕಾಡೆಮಿ ಅಧ್ಯಕ್ಷರಾಗಿ ತಮಗೆ ಸಂದ ಗೌರವ ಸಂಭಾವನೆ, ಸಭಾ ಭತ್ಯೆಯನ್ನೆಲ್ಲ ತಾವು ಸ್ಥಾಪಿಸಿದ ಕಲಾವಿದರ ಕ್ಷೇಮ ನಿಧಿಗೆ ನೀಡಿದರು. ಅಕಾಡೆಮಿಯ ಅಧ್ಯಕ್ಷರಾಗಿ ಮಾಡಿದ ಅನುಪಮ ಸೇವೆಯನ್ನು ಮನಗಂಡ ಸರ್ಕಾರ ಎರಡನೇ ಅವಧಿಗೆ ವಿಸ್ತರಿಸಿ ಮುಂದುವರಿಯಲು ಕೋರಿದಾಗ ನಯವಾಗಿಯೇ ನಿರಾಕರಿಸಿದರು.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ೨೫ ವರ್ಷಗಳ ಸುದೀರ್ಘಕಾಲ ಸೇವೆ ಸಲ್ಲಿಸಿದರು. ಈ ಅವಧಿಯಲ್ಲಿ ಕರ್ನಾಟಕಕ್ಕಷ್ಟೇ ಸಿಮಿತವಾಗಿದ್ದ ಶರಣ ಸಾಹಿತ್ಯ ಪರಿಷತ್ತಿನ ಘಟಕಗಳನ್ನು ಆಂಧ್ರ ಪ್ರದೇಶ, ತಮಿಳು ನಾಡು, ಮಹಾರಾಷ್ಟ್ರ ರಾಜ್ಯಗಳಿಗೂ ವಿಸ್ತರಿಸಿ ನಿಜವಾದ ಅರ್ಥದಲ್ಲಿ ಶರಣ ಸಾಹಿತ್ಯ ಪರಿಷತ್ತಿನ ಚಟುವಟಿಕೆಗಳನ್ನು ಅಖಿಲ ಭಾರತ ಮಟ್ಟಕ್ಕೇರಿಸಿದರು. ಅವರ ಸೇವಾವಧಿಯಲ್ಲಿ ಶರಣರಿಗೆ ಸಂಬಂಧಿಸಿದ ಅನೇಕ ಮೌಲಿಕ ಕೃತಿಗಳನ್ನು ಕನ್ನಡದಲ್ಲಿಯೇ ಅಲ್ಲದೆ ಇಂಗ್ಲೀಷ್, ಹಿಂದಿ, ತೆಲುಗು, ತಮಿಳು ಭಾಷೆಗಳಲ್ಲಿಯೂ ಪ್ರಕಟಿಸಿದರು. ಚಿಕ್ಕಮಗಳೂರು, ಬೆಳಗಾವಿ, ರಾಯಚೂರು, ಬಾಗಲಕೋಟೆ, ಗದಗ, ಭಾಲ್ಕಿ, ಮುಂಬೈ, ಧಾರವಾಡಗಳಲ್ಲಿ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನಗಳನ್ನು ಯಶಸ್ವಿಯಾಗಿ, ಅರ್ಥಪೂರ್ಣವಾಗಿ ನಡೆಸಿದ ಕೀರ್ತಿಗೆ ಭಾಜನರಾದರು. ಅವರ ಸೇವಾವಧಿಯಲ್ಲಿ ಅನೇಕ ಯೋಜನೆಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅನುಷ್ಠಾನಗೊಳಿಸಿದರು.



ನಿಸ್ವಾರ್ಥ ಸೇವೆ ಮಾಡಿದಾಗ ಸಮಾಜದ ಅನೇಕ ಸಂಘ ಸಂಸ್ಥೆಗಳು, ಮಠ ಮಾನ್ಯಗಳು ಗುರುತಿಸಿ ಸನ್ಮಾನ, ಪ್ರಶಸ್ತಿ ನೀಡಿ ಗೌರವಿಸುತ್ತಿವೆಂಬುದಕ್ಕೆ ಡಾ. ಗೊ.ರು.ಚ. ಅವರು ನಮ್ಮ ಕಣ್ಮುಂದೆ ಇರುವ ನಿದರ್ಶನ. ಅವರಿಗೆ ಕೀರ್ತಿ, ಪ್ರಶಸ್ತಿಗಳು ದಿನಬೆಳಗಾಗುವುದರೊಳಗೆ ಬರಲಿಲ್ಲ. ಸುಮಾರು ೭೦ ವರ್ಷಗಳ ಕಾಲ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಸಲ್ಲಿಸಿದ ಸೇವೆ ಅವರಿಗೆ ಕೀರ್ತಿ ಗೌರವಗಳನ್ನು ತಂದು ಕೊಟ್ಟಿವೆ. ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ, ನ್ಯೂ ಇಂಗ್ಲೆಂಡ್ ಕನ್ನಡ ಕೂಟ ಪ್ರಶಸ್ತಿ, ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ಶಿವಕುಮಾರಶ್ರೀ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ, ಜಾನಪದ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್, ರಾಷ್ಟ್ರೀಯ ಬಸವ ಪುರಸ್ಕಾರ ಪ್ರಶಸ್ತಿಯೂ ಸೇರಿದಂತೆ ಹಲವು ಪ್ರತಿಷ್ಠಿತ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ.

ಡಾ. ಗೊ.ರು.ಚ. ಅವರು ಅರ್ಧ ಶತಮಾನಕ್ಕೂ ಹೆಚ್ಚು ವರ್ಷಗಳಿಂದ ಶ್ರೀ ಸಿದ್ಧಗಂಗಾ ಮಠದ ಬಗ್ಗೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರವಾದ ಶ್ರದ್ಧಾ ಭಕ್ತಿಯನ್ನಿಟ್ಟುಕೊಂಡು ಬಂದಿದ್ದಾರೆ. ಶ್ರೀಮಠಕ್ಕೆ ಸಂಬಂಧಿಸಿದ ಸಾಕ್ಷ್ಯಚಿತ್ರ, ಚಿತ್ರಜಂಗಮ-ಚಿತ್ರ ಸಂಪುಟವೂ ಸೇರಿದಂತೆ, ಹಲವಾರು ಬೃಹತ್ ಸಮಾರಂಭಗಳು ಯಶಸ್ವಿಯಾಗಿ ನಡೆಯಲು ಸಲಹೆ, ಸೂಚನೆಗಳನ್ನು ನೀಡುವುದರ ಜೊತೆಗೆ ಸಕ್ರಿಯವಾಗಿ ಭಾಗವಹಿಸುತ್ತಾ ಬಂದಿದ್ದಾರೆ. ಇದೇ ಮೇ ೧೮ಕ್ಕೆ ೯೧ ವಸಂತಗಳ ಬೇವು ಬೆಲ್ಲವನ್ನು ಸವಿದು ೯೨ನೇ ವಸಂತಕ್ಕೆ ಪಾದಾರ್ಪಣೆ ಮಾಡುತ್ತಿರುವ ಈ ಶುಭ ಸಂದರ್ಭದಲ್ಲಿ ಹೃತ್ಪೂರ್ವಕ ಶುಭಾಶಯಗಳನ್ನು ಹಾಗೂ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷತೆಯ ಹೊಣೆಯನ್ನು ಹೊತ್ತಿದ್ದಕ್ಕೆ ಸಿದ್ಧಗಂಗಾ ಅಭಿನಂದನೆಗಳನ್ನು ಸಲ್ಲಿಸುತ್ತದೆ. ಅವರಿಂದ ನಾಡು ನುಡಿಗೆ ಮತ್ತಷ್ಟು ಕಾಲ ಸೇವೆ ಸಲ್ಲಿಸುವ ಶಕ್ತಿಯನ್ನು ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು ಪ್ರಾರ್ಥಿಸುತ್ತದೆ.



## ಶ್ರೀ ಜಿ. ವೀರಪ್ಪದೇವರು ವಿಧಿವಶ

ಶ್ರೀಮಠದ ಹಳೆಯ ವಿದ್ಯಾರ್ಥಿಯಾದ ಶ್ರೀ ಜಿ. ವೀರಪ್ಪದೇವರು ಮೇ ೮ ರಂದು ಕೋರೊನಾದಿಂದ ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ.

ತುಮಕೂರು ತಾಲ್ಲೂಕು ಹರಳೂರು ಗ್ರಾಮದಲ್ಲಿ ಶರಣ ಶ್ರೀ ಗಂಗಪ್ಪ ಹಾಗೂ ಶ್ರೀಮತಿ ಗೌರಮ್ಮ ದಂಪತಿಗಳ ಪುತ್ರರಾಗಿ ಜನಿಸಿದ ಶ್ರೀ ಜಿ. ವೀರಪ್ಪದೇವರು ಹರಳೂರಿನಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು, ಪ್ರೌಢಶಿಕ್ಷಣ ಹಾಗೂ ಪಿ.ಯು.ಸಿ. ಶಿಕ್ಷಣವನ್ನು ಶ್ರೀಮಠದಲ್ಲಿ ಪಡೆದರು.

ಬೆಂಗಳೂರು ಮಿಂಟೋ ಕಣ್ಣಿನ ಆಸ್ಪತ್ರೆಯಲ್ಲಿ ಕಣ್ಣಿನ ತಜ್ಞ ವೈದ್ಯರ ಸಹಾಯಕರಾಗಿ ವೃತ್ತಿಜೀವನ ಆರಂಭಿಸಿದ ಶ್ರೀಯುತರು ಪ್ರಿಯದರ್ಶಿನಿ ಆಪ್ಟಿಕಲ್ ಸೆಂಟರ್‌ನ್ನು ಪ್ರಾರಂಭಿಸಿ ಜನಪ್ರಿಯರಾಗಿದ್ದರು. ವಜ್ರ ಮಹೋತ್ಸವ ಸಂದರ್ಭದಲ್ಲಿ ಹೊರತಂದ 'ಸಿದ್ಧಗಂಗಾ' ವಿಶೇಷ ಸಂಪುಟದ ಜಾಹಿರಾತು ಸಮಿತಿ ಸದಸ್ಯರಾಗಿ, ಅಮೂಲ್ಯ ಸೇವೆ ಸಲ್ಲಿಸಿದ್ದರು. ಶ್ರೀ ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅನನ್ಯ ಭಕ್ತಿ ಗೌರವವನ್ನಿಟ್ಟುಕೊಂಡಿದ್ದರು. ಶ್ರೀ ಜಿ. ವೀರಪ್ಪದೇವರ ಅಪೇಕ್ಷೆಯಂತೆ ಪರಮಪೂಜ್ಯ ಶ್ರೀ ಶ್ರೀಗಳವರ ಹುಟ್ಟೂರು ವೀರಾಪುರದಲ್ಲಿ ಅಂತ್ಯಸಂಸ್ಕಾರ ನೆರವೇರಿಸಲಾಯಿತು.

ಮೃತರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಅವರ ಕುಟುಂಬ ವರ್ಗದವರಿಗೆ ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ ಹಾಗೂ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.







ಲೇಖನ

# ಶರಣರ ಆರ್ಥಿಕ ಪರಿಕಲ್ಪನೆಗಳು

– ಡಾ. ಬಿ. ಶೇಷಾದ್ರಿ *

(ಕಳೆದ ಸಂಚಿಕೆಯಿಂದ)

**ಭಾಗ – ೪ : ಶರಣರ ಕೆಲವು ಆಯ್ದ ಹಾಗೂ ಅಭಿವೃದ್ಧಿ ಸಂಬಂಧಿ ಪರಿಕಲ್ಪನೆ–ಪರಿಭಾವನೆಗಳು**

ಶರಣರು, ಧರ್ಮದ ಹೆಸರಿನಲ್ಲಿ, ಆಧ್ಯಾತ್ಮದ ಹೆಸರಿನಲ್ಲಿ, ಮೋಕ್ಷದ ಹೆಸರಿನಲ್ಲಿ ಇಹದ ಬದುಕನ್ನು ಹಾಗೂ ಆ ಬದುಕಿಗೆ ಅತ್ಯವಶ್ಯಕವಾಗಿ ಬೇಕಾದ ಸಂಪನ್ಮೂಲಗಳನ್ನು ತ್ಯಾಜ್ಯವೆಂದು ಪರಿಗಣಿಸಿಲ್ಲ. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ ಎಂದು ನಂಬಿದ ಶರಣರು "ಅರ್ಥ"ಕ್ಕೆ ತನ್ನದೇ ಆದ ಸ್ಥಾನವನ್ನು ಒದಗಿಸಿಕೊಟ್ಟರು. ಮಾನವನ ಒಟ್ಟಾರೆ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಭೌತಿಕ ಸಂಪನ್ಮೂಲಗಳಿಗೆ ಇರುವ ನಿರ್ಣಾಯಕ ಪಾತ್ರವನ್ನು ೧೯ನೇ ಶತಮಾನದಲ್ಲಿ ಕಾರ್ಲ್‌ಮಾರ್ಕ್ಸ್ ಮತ್ತು ಆಲ್‌ಫ್ರೆಡ್ ಮಾರ್ಷಲ್ ಮುಂತಾದವರು ತಮ್ಮ ಬರಹಗಳ ಮೂಲಕ ಪ್ರಪಂಚಕ್ಕೆ ಸಾರಿದರು. ಈ ಪರಿಕಲ್ಪನೆ ಶರಣರಿಗಿತ್ತು. ಕಾಮಿನಿ–ಕಾಂಚಣಗಳು ಸಂಪೂರ್ಣವಾಗಿ ತ್ಯಾಜ್ಯವೆಂಬುದನ್ನು ಶರಣರು ಒಪ್ಪಲಿಲ್ಲ. ಅವರ ದೃಷ್ಟಿಯಲ್ಲಿ ಅವು ಜೀವನದ ಕೆಲವು ಅವಶ್ಯಕತೆಗಳನ್ನು ಪೂರೈಸುವ ಮೂಲಭೂತ ಮೌಲ್ಯಗಳು. ಅವುಗಳಿಗೆ ಅಂತಸ್ಥ ಗುಣಕ್ಕಿಂತ ಮಿಗಿಲಾಗಿ ಉಪಕರಣವಾದಿ ಗುಣವಿದೆ. ಅವು ತಮ್ಮಷ್ಟಕ್ಕೆ ತಾವೇ ತ್ಯಾಜ್ಯವೂ ಅಲ್ಲ, ಪೂಜ್ಯವೂ ಅಲ್ಲ. ಈ ರೀತಿಯ ಪರಿಕಲ್ಪನೆ ಅಲ್ಲಮಪ್ರಭುಗಳ ಮಾತುಗಳಲ್ಲಿ ಅಭಿವ್ಯಕ್ತವಾಗಿದೆ. ಅವರ ದೃಷ್ಟಿಯಲ್ಲಿ ಹೊನ್ನು, ಹೆಣ್ಣು ಮತ್ತು ಮಣ್ಣು ಮಾಯೆಯಲ್ಲ. ಆದರೆ ಮನದ ಮುಂದಣ ಆಸೆಯೇ ಮಾಯೆ. ಹೀಗಾಗಿ ಬಸವಾದಿ ಶರಣರು, ಮಾಯೆಯೆಂಬ ನೆಪದಲ್ಲಿ 'ಅರ್ಥ'ವನ್ನು ತ್ಯಜಿಸಿ ಸಮಾಜ ನಿರ್ಮಾಣ ಕಾರ್ಯದಲ್ಲಿ ತೊಡಗಲಿಲ್ಲ. ಅದನ್ನು ಇಹದ ಬದುಕಿಗೆ ಸಾಧಕ ಮೌಲ್ಯವನ್ನಾಗಿ ಮಾಡಿಕೊಂಡರು. ಅಂದಿನ ಅರ್ಥ ಇಂದು ಅತ್ಯಂತ ವಿಶಾಲವಾದ ಅರ್ಥವನ್ನು ಪಡೆದುಕೊಂಡು ಜನರ ಆರ್ಥಿಕ, ಸಾಮಾಜಿಕ, ರಾಜಕೀಯ ಸ್ಥಿತಿಗಳನ್ನು ಹಾಗೂ ಸ್ಥಾನಮಾನಗಳನ್ನು ನಿರ್ಣಯಿಸುವ ಪ್ರಮುಖ ಸಾಧನವಾಗಿರುವುದು ನಮಗೆಲ್ಲ ತಿಳಿದ ವಿಷಯ.

ಶೋಷಣೆಮುಕ್ತ ವ್ಯವಸ್ಥೆಯನ್ನು ಅಸ್ತಿತ್ವಕ್ಕೆ ತರುವ ದಿಸೆಯಲ್ಲಿ ಶರಣರು ಬಳಸಿಕೊಂಡ ಪ್ರಮುಖವಾದ ಪರಿಕಲ್ಪನೆ "ಕಾಯಕ". ಇದೊಂದು ಕ್ರಾಂತಿಕಾರಿ ಪರಿಕಲ್ಪನೆ. ಧರ್ಮಾರ್ಥಗಳ ಹಾಗೂ ಇಹಪರಗಳ ಮಧ್ಯೆ ಬೆಸುಗೆಯನ್ನು ಹಾಕಲು ಶರಣರು ಪ್ರಜ್ಞಾಪೂರ್ವಕವಾಗಿ ಬೆಳೆಸಿ ಪರಿಣಾಮಕಾರಿಯಾಗಿ ಬಳಸಿದ ಅಂತಸ್ಥ ಹಾಗೂ ಉಪಕರಣವಾದಿ ಮೌಲ್ಯವಿರುವ ಅನನ್ಯ ಪರಿಕಲ್ಪನೆ. ಇದೊಂದು ಬಹುಳಾಕಾರಿ ಪರಿಕಲ್ಪನೆ, ದಾಸೋಹ, ಅಸಂಗ್ರಹವಾದ, ಶ್ರಮಗೌರವ, ಲಂಚಪದ್ಧತಿ, ಉಳ್ಳವರ ಪರಿಸ್ಥಿತಿ, ಬಡ್ಡಿ, ಕೊರತೆ, ಮಿತವ್ಯಯ ಮುಂತಾದ ಪರಿಕಲ್ಪನೆಗಳು ಒಂದಲ್ಲ ಒಂದು ರೀತಿಯಲ್ಲಿ ಕಾಯಕದ ಸುತ್ತ ಕಟ್ಟಲ್ಪಟ್ಟ ಪರಿಕಲ್ಪನೆಗಳು.

**ಕಾಯಕ :** ವೀರಶೈವ–ಲಿಂಗಾಯತ ಧರ್ಮದ ಹೃದಯ ಕಾಯಕ. ಇಲ್ಲಿ ಸಲ್ಲಲು ಬೇಕಾದದ್ದು ಸತ್ಯ, ಶುದ್ಧ ಕಾಯಕ, ಅಲ್ಲಿ ಸಲ್ಲಲೂ ಬೇಕಾದದ್ದೂ ಅದೇ ಕಾಯಕ. ಕಾಯಕಕ್ಕೇ ಶರಣರು ನೀಡಿದ ಸ್ಥಾನ ಅತ್ಯುನ್ನತವಾದದ್ದು. ಅದನ್ನು ಕೈಲಾಸದ ಮಟ್ಟಕ್ಕೇರಿಸಿದರು. ಕಾಯಕವನ್ನು ಕೈಲಾಸಕ್ಕೆ ಪರ್ಯಾಯ ಪದವನ್ನಾಗಿ ಬಳಸಿದರು. ಅವರ ಬದುಕು ಮತ್ತು ಬರಹಗಳಲ್ಲಿ ಕಾಯಕದಿಂದ ಕೈಲಾಸವಲ್ಲ. ಕಾಯಕವೇ ಕೈಲಾಸ. ಎಲ್ಲಾ ರೀತಿಯ ದುಡಿಮೆ ಕಾಯಕವಾಗುವುದಿಲ್ಲ. ಸತ್ಯವಾದ ಶುದ್ಧವಾದ ಕೆಲಸ ಮಾತ್ರ ಕಾಯಕ. ಭಾವ ಶುದ್ಧಿಯಿಂದ ಅರ್ಪಣಾ ಮನೋಭಾವನೆಯಿಂದ ಮಾಡಿದ ಕೆಲಸ ಕಾಯಕ. ಜೇಡರ ದಾಸಿಮಯ್ಯ ಹಾಗೂ ಆಯ್ದಕ್ಕಿ ಮಾರಯ್ಯ ಕಾಯಕಕ್ಕೆ ತಮ್ಮ ಬದುಕಿನಲ್ಲಿ ಅತ್ಯುನ್ನತ ಸ್ಥಾನ ನೀಡಿದ್ದರು. ದಾಸಿಮಯ್ಯನ ಕಾಯಕ ನಿಷ್ಠೆ ಅಗಾಧವಾದುದು. ಅವರ ಭಕ್ತಿಗೆ ಮೆಚ್ಚಿ ಶಿವನು "ಬೇಕಾದುದನ್ನು ಕೇಳು' ಎನ್ನಲು, ದಾಸಿಮಯ್ಯ ಹೀಗೆ ಪ್ರತಿಕ್ರಿಯಿಸಿದರೆಂದು ಹೇಳಲಾಗಿದೆ.

* ಪ್ರಸಿದ್ಧ ಲೇಖಕರು, ಬಳ್ಳಾರಿ





**ಶಿವನೇ ಶರಣರು ವರವನ್ನಂತೂ ಬೇಡುವುದಿಲ್ಲ**
**ಬೇಡುವುದು, ನಮ್ಮ ಕೆಲಸವಲ್ಲ**
**ನಿನಗೆ ಕೊಡಲೇಬೇಕೆಂಬ ಆತುರವಿದ್ದರೆ**
**ಕತ್ತಲೆಯಲ್ಲಿಯೂ, ಸೂಜಿಗೆ ದಾರ ಪೋಣಿಸುವ**
**ಕಣ್ಣು ಬೆಳಕು ನೀಡಾ ರಾಮನಾಥ.**

ಕಾಯಕ ನಿಷ್ಠೆಯಲ್ಲಿ ಆಯ್ದಕ್ಕಿ ಮಾರಯ್ಯನ ಉದಾಹರಣೆ ಪ್ರಶಂಸನೀಯವಾದದ್ದು. ಮಾರಯ್ಯ ತನ್ನ ದಿನನಿತ್ಯ ಜೀವನದಲ್ಲಿ ಕಾಯಕಕ್ಕೆ ಗುರು ಲಿಂಗ ಜಂಗಮಕ್ಕಿಂತಲೂ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದರು. ಅವರ ಪ್ರಕಾರ

**ಕಾಯಕದಲ್ಲಿ ನಿರತನಾದರೆ**
**ಗುರುದರ್ಶನವಾದರೂ ಮರೆಯಬೇಕು,**
**ಲಿಂಗಪೂಜೆಯಾದರೂ ಮರೆಯಬೇಕು**
**ಜಂಗಮ ಮುಂದಿದ್ದರೂ ಹಂಗು ಹರಿಯಬೇಕು**
**ಕಾಯಕವೇ ಕೈಲಾಸವಾದ ಕಾರಣ**
**ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗೆ.**

ಕಾಯಕ ನಿಷ್ಠೆಯ ಪರಮಾವಧಿ ತಲುಪಿದ್ದ ಮಾರಯ್ಯ ಕಾಯಕದೊಳಗೆ ತೊಡಗಿಸಿಕೊಂಡಾಗ ಶಿವನನ್ನು ಕೂಡಾ ಕಡೆಗಣಿಸಬೇಕೆಂಬ ನಿಲುವನ್ನು ಕಂಡು ಅಲ್ಲಮಪ್ರಭು ಬೆಚ್ಚಿದರಂತೆ.

ಕಾಯಕ ನಿಷ್ಠೆಗೆ ಅತ್ಯಂತ ಮಹತ್ವವನ್ನು ಕೊಟ್ಟ ಇನ್ನೊಬ್ಬ ಶರಣ, ಕರ್ಮಯೋಗಿ ಸಿದ್ಧರಾಮ. ಸಿದ್ಧರಾಮ ಕಾಯಕವನ್ನು ತಾತ್ವಿಕ ಹಾಗೂ ಬೋಧನೆಯ ಮಟ್ಟಕ್ಕೆ ಸೀಮಿತಗೊಳಿಸದೇ, ಅದನ್ನು ತನ್ನ ಸ್ವಂತ ಬದುಕಿನಲ್ಲಿ ಆಚರಣೆಗೆ ತಂದವನು. ತಾನು ಸ್ವತಃ ಮೈಮುರಿದು ದುಡಿದು ತಿನ್ನುವ ಜನರೊಡನೆ ಬೆರತು ಕಾಯಕದ ಹಿರಿಮೆಯನ್ನು ಸಾರಿದವರು ಸಿದ್ಧರಾಮ ಶರಣರು. ಮೊದಲು ಕೆಲಸ ಮತ್ತು ಆ ಕೆಲಸದಿಂದ ಮೋಕ್ಷ ಎಂದು ಹೇಳಿದರು.

ದಾಸೋಹ : ಕಾಯಕದ ಜೊತೆಯಲ್ಲಿ ಬಂದ ಇನ್ನೊಂದು ಪರಿಕಲ್ಪನೆ "ದಾಸೋಹ." ಗಳಿಸಿದ್ದನ್ನು ಸಮುದಾಯದ ಜಂಗಮರಿಗೆ, ಬಡವರಿಗೆ, ದುರ್ಬಲರಿಗೆ ವ್ಯಯಿಸಿದರೆ ಮಾತ್ರ ಈ ಗಳಿಕೆಗಾಗಿ ಮಾಡಿದ ಶ್ರಮ ಕಾಯಕವಾಗುತ್ತದೆ. ದುಡಿಮೆಯ ಫಲ ಸಂಪೂರ್ಣವಾಗಿ ಸ್ವಹಿತಕ್ಕಾಗಿಯೇ ಬಳಸಿದರೆ, ಅದು ಶರಣರ ವಿಚಾರದಲ್ಲಿ ಸಾಧಾರಣ ದುಡಿಮೆಯಾಗುತ್ತದೆಯೇ ಹೊರತು ಪವಿತ್ರವಾದ ಕಾಯಕವಾಗುವುದಿಲ್ಲ. ಶರಣ ಕಾಯಕ ವ್ಯವಸ್ಥೆಯಲ್ಲಿ ದಾಸೋಹ ಕಾಯಕದ ಫಲವೂ ಆಯಿತು ಅದರ ಉದ್ದೇಶವೂ ಆಯಿತು. ಕಾಯಕದಲ್ಲಿ ಅಡಕವಾಗಿರುವ ಸತ್ಯತೆ ಹಾಗೂ ಶುದ್ಧತೆ ಸಾಧನಗಳ ನೈತಿಕತೆಯನ್ನು ಸಾರಿದರೆ, ದಾಸೋಹದಲ್ಲಿ ಅಡಕವಾಗಿರುವ ಸಾಮಾಜಿಕ ಕಾಳಜಿಗಳ ಮತ್ತು ಬದ್ಧತೆಗಳು ನೈತಿಕತೆಗಳನ್ನು ಸಾರುತ್ತದೆ. ಶರಣರು ದಾಸೋಹ ಪರಿಕಲ್ಪನೆಗಿತ್ತ ಗೌರವಯುತ ಸ್ಥಾನವನ್ನು ಬಸವಣ್ಣನವರ ಈ ವಚನದಲ್ಲಿ ಕಾಣಬಹುದು.

**ಕೃಷಿ ಕೃತ್ಯ ಕಾಯಕವಾದೊಡೇನು ?**
**ತನುಮನ ಬಳಲಿಸಿ ತಂದು ದಾಸೋಹ ಮಾಡುವ**
**ಪರಮ ಸದ್ಭಕ್ತನ ಪಾದವ ತೋರಯ್ಯ ಎನಗೆ**
**ಅದೆಂತೆನೆ, ಆತನ ತನು ಶುದ್ಧ, ಆತನ ಮನ ಶುದ್ಧ**
**ಆತನ ದೇಹ ಶುದ್ಧ, ನುಡಿಯೆಲ್ಲ ಪಾವನವು**
**ಆತಂಗೆ ಉಪದೇಶ ಮಾಡಿದಾತನೇ ಪರಮ ಸದ್ಗುರು**
**ಅಂತಪ್ಪ ಸದ್ಭಕ್ತನ ಮನೆಯೆ ಕೈಲಾಸವೆಂದು ಹೊಕ್ಕು**
**ಲಿಂಗಾರ್ಚನೆ ಮಾಡುವ ಜಂಗಮನೇ ಜಗತ್ಪಾವನ**
**ಇಂತಪ್ಪವರ ನಾನು ನೆರೆನಂಬಿ**
**ನಮೋ ನಮೋ ಎಂಬೆನಯ್ಯ**
**ಕೂಡಲಸಂಗಮದೇವಾ.**

ಶರಣರ ಕಾಯಕ ದಾಸೋಹ ಪರಿಕಲ್ಪನೆಗಳ ಚೈತನ್ಯವನ್ನು ನಮ್ಮ ಕಾಲದಲ್ಲಿ ಗಾಂಧೀಜಿಯವರ ಆರ್ಥಿಕ ಪರಿಕಲ್ಪನೆಗಳಲ್ಲಿ ಕಾಣಬಹುದು. ಗಾಂಧೀಜಿಯವರ ಪ್ರಕಾರ ಪವಿತ್ರವಾದ ಸಾಧನದಿಂದ ಮಾತ್ರ ಪವಿತ್ರವಾದ ಸಾಧ್ಯವನ್ನು ಸಾಧಿಸಬಹುದೆಂದು ನಂಬಿದ್ದರು.

ಅಸಂಗ್ರಹ ಪ್ರವೃತ್ತಿ : ಶರಣರು 'ಅಸಂಗ್ರಹ' ವಾದಿಗಳು. ಸಂಗ್ರಹ ಪ್ರವೃತ್ತಿಯನ್ನು ಕಠಿಣವಾಗಿ ಟೀಕಿಸಿದವರು. ಆರ್ಥಿಕ ಇತಿಹಾಸದ ಪುಟಗಳನ್ನು ಅವಲೋಕಿಸಿದರೆ ವಸ್ತುಗಳ ಕೊರತೆ, ಬೆಲೆ, ಏರಿಕೆ, ಬಡವ ಬಲ್ಲಿದರ ಮಧ್ಯೆ ಇರುವ ಅಂತರ ಇವೆಲ್ಲವುಗಳಿಗೆ ಸಂಗ್ರಹ ಪ್ರವೃತ್ತಿ ಮುಖ್ಯ ಕಾರಣವೆಂದು ತಿಳಿದುಬರುತ್ತದೆ. ದೇಶದ ಬಹುಪಾಲು ವರಮಾನ ಕೆಲವೇ ಕೆಲವು ವ್ಯಕ್ತಿಗಳಲ್ಲಿ ಸಂಗ್ರಹಗೊಂಡರೆ ಅಸಮಾನತೆ ದುಸ್ಥಿತಿಗಳು ಕಾಣಿಸಿಕೊಳ್ಳುವುದು ಅನಿವಾರ್ಯ. ಆರ್ಥಿಕ ಸಮತೋಲನಕ್ಕೆ ಸಂಗ್ರಹ ಪ್ರವೃತ್ತಿ ದೊಡ್ಡ ಕಂಟಕವೆಂಬುದು ಶರಣರ





ವಿಚಾರವಾಗಿತ್ತು. ಅಂದಂದಿನ ಭೋಗಕ್ಕೆ ಬೇಕಾಗುವಷ್ಟನ್ನೇ ಇಟ್ಟುಕೊಳ್ಳುವುದು ವಿಹಿತವೆಂದು ಸಾರಿದರು ಶರಣರು. ಸಂಪತ್ತಿನ ಗಳಿಕೆಯನ್ನು ಶರಣರು ಪ್ರೋತ್ಸಾಹಿಸಿದರು. ಆದರೆ ಅದರ ಸಂಗ್ರಹ ಸಾಮಾಜಿಕವಾಗಿ ಹಾನಿಕರ ಎಂಬುದನ್ನು ತಮ್ಮ ವಚನಗಳಲ್ಲಿ ತೋರಿಸಿದರು. ಅವರ ಪ್ರಕಾರ, ಗಳಿಸಿದ ಸಂಪತ್ತು ಒಂದೆಡೆ ಸಂಗ್ರಹಗೊಳ್ಳದೆ, ಸಮಾಜದಲ್ಲಿ ಪ್ರವಹಿಸುತ್ತಿರಬೇಕು. ವ್ಯಕ್ತಿಯಲ್ಲಿ ಸಂಗ್ರಹಗೊಳ್ಳುವ ಅರ್ಥ ವ್ಯರ್ಥವೆಂಬುದು, ಸಮಾಜಕ್ಕೆ ಅರ್ಪಿತವಾಗುವ ಅರ್ಥ ಸಾರ್ಥಕವೆಂಬುದು ಶರಣರ ನಿಲುವಾಗಿತ್ತು. ಇಂತಹ ನಿಲುವು ಬಸವಣ್ಣ ಹಾಗೂ ಅವರ ಸಮಕಾಲೀನ ಶರಣ-ಶರಣೆಯರ ವಚನಗಳಲ್ಲಿ ಕಾಣಬಹುದು. ಬಸವಣ್ಣನವರ ಮಾತುಗಳನ್ನು ಗಮನಿಸೋಣ.

**ಹೊನ್ನಿನೊಳಗೊಂದೆರೆಯ, ಸೀರೆಯೊಳಗೊಂದೆಳೆಯ**
**ಅನ್ನದೊಳಗೊಂದಗುಳ**
**ಇಂದಿಂಗೆ, ನಾಳಿಂಗೆ ಬೇಕೆಂದೆನಾದರೆ**
**ನಿಮ್ಮಾಣೆ, ನಿಮ್ಮ ಪುರಾತನರಾಣೆ.**

ಉಣ್ಣುವ ಉಡುವ ಅಲಂಕಾರಕ್ಕೆ ಬಳಸುವ ಅನ್ನ, ಬಟ್ಟೆ, ಚಿನ್ನ ಇವುಗಳಲ್ಲಿ ಯಾವುದೊಂದನ್ನೂ ತಾನು ಅವಶ್ಯಕತೆಯಿಲ್ಲದಾಗ ಬಳಸಲಾರ, ಬಚ್ಚಿಡಲಾರ ಎಂಬಲ್ಲಿ ಬಸವಣ್ಣ ಬೋಧಿಸಿದ್ದು ಆಸೆಯನ್ನು ಜಯಿಸಬೇಕೆಂದು ಮಾತ್ರವಲ್ಲ, ಅದರ ಜೊತೆಗೆ ಸಂಗ್ರಹದಿಂದ ಮತ್ತೊಬ್ಬರಿಗೆ ತೊಂದರೆಯಾಗುತ್ತದೆಂಬ ವಿಷಯವೂ ಬೋಧನೆಯಲ್ಲಿ ಇಂಗಿತವಾಗಿದೆ. ಬಸವಣ್ಣನವರ ಅಸಂಗ್ರಹ ತತ್ತ್ವಪಾಲನೆಯ ತೀವ್ರತೆಯನ್ನು ಅವರ ಮನೆಗೊಬ್ಬ ಕಳ್ಳ ಹೊಕ್ಕು ಅವರ ಹೆಂಡತಿಯ ಮಾಂಗಲ್ಯ ಓಲೆಗಳಿಗೆ ಕೈಹಚ್ಚಿದಾಗ, ಗಾಬರಿಯಿಂದ ಚೀರಿದ ಹೆಂಡತಿಯ ಧ್ವನಿಗೆ ಎಚ್ಚೆತ್ತ ಬಸವಣ್ಣ ಕಳ್ಳನನ್ನು ದಂಡಿಸದೆ, ಹೆಂಡತಿಯನ್ನು ದಂಡಿಸಿ ತನ್ನನ್ನು ತಾನು ನಿಂದಿಸಿಕೊಳ್ಳುವ ಮಾತುಗಳಲ್ಲಿ ನೋಡುತ್ತೇವೆ.

**ಒಡನಿರ್ದ ಸತಿಯೆಂದು ನಚ್ಚಿರ್ದೆನಯ್ಯಾ**
**ಕೈವಿಡಿದ ಸಜ್ಜನೆಯೆಂದು ನಂಬಿರ್ದೆನಯ್ಯಾ**
**ಅಯ್ಯೋ, ನಮ್ಮಯ್ಯನ ಕೈ ನೊಂದಿತ್ತು,**
**ತೆಗೆದುಕೊಡಾ ಎಲೆ ಚಂಡಾಲಗಿತ್ತಿ**
**ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದರೆ**
**ಕೂಡಲ ಸಂಗಮದೇವನಲ್ಲದೆ ಆರೂ ಅಲ್ಲ.**

ಅಸಂಗ್ರಹ ವಿಷಯವಾಗಿ ಆಯ್ದಕ್ಕಿ ಮಾರಯ್ಯನ ಮಡದಿ ಲಕ್ಕಮ್ಮನ ವಚನಗಳು ಹೆಚ್ಚು ಅರ್ಥವತ್ತಾದವು. ಚೆಲ್ಲಿದ ಅಕ್ಕಿಯನ್ನು ಆಯ್ದು ತರುವುದು ಮಾರಯ್ಯನ ಕಾಯಕ. ಒಂದು ದಿನ ಅಗತ್ಯಕ್ಕಿಂತ ಹೆಚ್ಚು ಅಕ್ಕಿಯನ್ನು ಮಾರಯ್ಯ ಆಯ್ದು ತಂದಾಗ, ಗಂಡನ ಆ ಪರಿಯನ್ನು ಕಂಡು ವಿಸ್ಮಿತಳಾಗಿ ಈ ರೀತಿ ಪ್ರಶ್ನಿಸುತ್ತಾಳೆ.

**ಎನ್ನಾಳ್ದರೆ ಯಾಕೆ ಹೆಚ್ಚು ತಂದಿರಿ?**
**ನಿತ್ಯದಷ್ಟೇ ಸಾಕು, ಈ ಹೆಚ್ಚಿನ**
**ದುರಾಶೆ ನಿಮಗೇಕೆ ಉಂಟಾಯಿತು**
**ಆಸೆಯೆಂಬುದು ಅರಸಂಗಲ್ಲದೆ ಶಿವಭಕ್ತರಿಗುಂಟೇ ಅಯ್ಯಾ**
**...............**
**ಈಸಕ್ಕಿಯ ಆಶೆ ನಿಮಗೇಕೆ ಈಶ್ವರನೊಪ್ಪ**
**ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ ದೂರ**
**ಮಾರಯ್ಯ,**

ಲಕ್ಕಮ್ಮ ಹಾಗೆಯೇ ಮುಂದುವರಿದು,

**ಬಡತನವೆಂದು ಬಗೆದು ಹೆಚ್ಚಿಗೆ ತಂದಿರಾ ?**
**ಭಕ್ತಂಗೆ ಬಡತನವುಂಟೆ ? ನಿತ್ಯಂಗೆ ಮರಣವುಂಟೆ ?**
**ಭಕ್ತರು ಬಡವರೆಂದು ಮತ್ತೊಂದು ಕೊಟ್ಟಹೆನೆಂದರೆ**
**ಮಾರಯ್ಯಪ್ರಿಯ ಅಮರೇಶ್ವರಲಿಂಗವು ಸತ್ತಂದಿಗಲ್ಲದೆ**
**ಬಡತನವಿಲ್ಲ.**

ಈ ರೀತಿ ಹಲವಾರು ಪ್ರಶ್ನೆಗಳನ್ನು ಎತ್ತುವುದರ ಮೂಲಕ ಲಕ್ಕಮ್ಮ ಅಸಂಗ್ರಹದ ಬಗ್ಗೆ ತನ್ನ ನಿಖರವಾದ ನಿಲುವನ್ನು ತೋರಿದ್ದಾಳೆ. ಲಕ್ಕಮ್ಮ ತನ್ನ ಗಂಡನಿಗೆ ಹೆಚ್ಚಿಗೆ ತಂದ ಅಕ್ಕಿಯನ್ನು ಸುರಿದುಬರಲು ಹೇಳುವಲ್ಲಿ ಆ ಶರಣೆಯ ನಿಲುವು ಇನ್ನೂ ಸ್ಪಷ್ಟವಾಗುತ್ತದೆ.

**ಒಮ್ಮನವ ಮೀರಿ ಇಮ್ಮನದಲ್ಲಿ ತಂದಿರಿ**
**ಇದು ನಿಮ್ಮ ಮನವೋ ?**
**ಬಸವಣ್ಣನ ಅನುಮಾನ ಚಿತ್ತವೋ ?**
**ಈ ಮಾತು ಮಾರಯ್ಯಪ್ರಿಯ ಅಮರೇಶ್ವರಲಿಂಗಕ್ಕೆ**
**ಸಲ್ಲದ ಬೋನ, ಅಲ್ಲಿಯೇ ಸುರಿದು ಬನ್ನಿ ಮಾರಯ್ಯ**

ಹೀಗೆ ಧರ್ಮದ ಹೆಸರಿನಲ್ಲಿ, ದೇವರ ಹೆಸರಿನಲ್ಲಿ, ಅಂದು ಸಮಾಜದಲ್ಲಿ ತಲೆದೋರಿದ್ದ ಸಂಗ್ರಹ ಪ್ರವೃತ್ತಿಯನ್ನು ನಿರ್ಮೂಲ ಮಾಡಲು ಶರಣ-ಶರಣೆಯರು ಶ್ರಮಿಸುತ್ತಿದ್ದರು.

(ಮುಂದುವರೆಯುತ್ತದೆ)

ಶರಣಾಂಜಲಿ

# ಚುಟುಕು ಕವಿ ಜರಗನಹಳ್ಳಿ ಶಿವಶಂಕರ್



ಪ್ರಸಿದ್ಧ ಚುಟುಕು ಕವಿ, ಸಾಹಿತಿ, ಶ್ರೀ ಜರಗನಹಳ್ಳಿ ಶಿವಶಂಕರ್ ಅವರು ಮೇ ೫ ರಂದು ಕೊರೋನಾದಿಂದ ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ. ಅವರಿಗೆ ೭ ವರ್ಷವಾಗಿತ್ತು.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ಶ್ರೀ ಜರಗನಹಳ್ಳಿ ಶಿವಶಂಕರ್ ಅವರು ಸಾಮಾಜಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡಿದ್ದರು. ೧೯೪೯ರ ಸೆ. ೮ ರಂದು ಬೆಂಗಳೂರು ನಗರಕ್ಕೆ ಹೊಂದಿಕೊಂಡಿರುವ ಜರಗನಹಳ್ಳಿಯಲ್ಲಿ ಜನಿಸಿದರು. ಶಿವಶಂಕರ್ ಅವರು ವಾಣಿಜ್ಯ ಪದವಿ ಪಡೆದು. ಕೆನರಾ ಬ್ಯಾಂಕ್‌ನಲ್ಲಿ ೨೮ ವರ್ಷಗಳ ಸೇವೆ ಸಲ್ಲಿಸಿ ಸಾಹಿತ್ಯ ಕ್ಷೇತ್ರದಲ್ಲಿ ತೊಡಗಿಸಿಕೊಳ್ಳುವ ಉದ್ದೇಶದಿಂದ ಸ್ವಯಂ ನಿವೃತ್ತಿ ಹೊಂದಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿ ಕನ್ನಡ ಪರ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದರು.

ಸಾಹಿತ್ಯ ರಚನೆ ಮಾಡುವುದರ ಜೊತೆಗೆ ಕಾವ್ಯ ಪ್ರಕಟಣೆಗೆ ಮೀಸಲಾದ ಶುಭದಾ ಪ್ರಕಾಶನದ ಸ್ಥಾಪಕರಾಗಿ ವಿವಿಧ ಬರಹಗಾರರಿಂದ ೫೦ಕ್ಕೂ ಹೆಚ್ಚು ಕವನ ಸಂಕಲನಗಳನ್ನು ಪ್ರಕಟಿಸಿದ್ದರು. ಅವರು ನೂರಾರು ಕವನಗಳು, ಕಿರುಗವನಗಳು ಹಾಗೂ ಹನಿಗವನಗಳು ನಾಡಿನ ಪ್ರಮುಖ ನಿಯತಕಾಲಿಕೆಗಳಲ್ಲಿ ಪ್ರಕಟಗೊಂಡಿದೆ.

ಜರಗನಹಳ್ಳಿ ಶಿವಶಂಕರ್ ಅವರ ಹನಿಗವನಗಳ ಸಂಕಲನ "ಝುರಿ' ಹಿಂದಿ, ತೆಲುಗು, ತಮಿಳು, ಗುಜರಾತಿ, ಇಂಗ್ಲೀಷ್, ಉರ್ದು ಮತ್ತಿತ್ತರ ಭಾಷೆಗಳಿಗೂ ಅನುವಾದಗೊಂಡಿದೆ. ಕಾಸರಗೋಡಿನಲ್ಲಿ ೨೦೦೭ ರಲ್ಲಿ ನಡೆದ ಅಖಿಲ ಕರ್ನಾಟಕ ಚುಟುಕು ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವಕ್ಕೆ ಪಾತ್ರರಾಗಿದ್ದರು. ೨೦೦೫ ರಲ್ಲಿ ಮಧ್ಯಪ್ರದೇಶದ ಭೂಪಾಲ್‌ನಲ್ಲಿ ನಡೆದ 'ಕವಿಭಾರತಿ' ಸಮ್ಮೇಳನದಲ್ಲಿ ಕರ್ನಾಟಕ ಪ್ರತಿನಿಧಿಯಾಗಿ ಭಾಗವಹಿಸಿದ್ದರು. ಕನ್ನಡ ಸಂಸ್ಕೃತಿ ಇಲಾಖೆ ನಡೆಸುವ 'ಮನೆಯಂಗಳದಲ್ಲಿ ಮಾತುಕತೆ' ಕಾರ್ಯಕ್ರಮದಲ್ಲಿ ತಿಂಗಳ ಅತಿಥಿಯಾಗಿ ಭಾಗವಹಿಸಿದ್ದರು. ೨೦೧೬ ರಲ್ಲಿ ರಾಯಚೂರಿನಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿದ್ದರು. ಅವರು ಬರೆದ 'ಹೊಸಗನ್ನಡ ಕಾವ್ಯ ಸಂಚಯ ಕೃತಿಯು ವಿಜಯಪುರದಲ್ಲಿರುವ ರಾಜ್ಯ ಮಹಿಳಾ ವಿಶ್ವವಿದ್ಯಾಲಯದ ಬಿ.ಎ. ಮೂರನೇ ಸೆಮಿಸ್ಟರ್‌ನ ಕನ್ನಡ ಐಚ್ಛಿಕ ಪಠ್ಯಪುಸ್ತಕವಾಗಿತ್ತು. ಅವರ ಹನಿಗವನಗಳು ತುಮಕೂರು ವಿಶ್ವವಿದ್ಯಾಲಯದ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಪಠ್ಯವಾಗಿತ್ತು.

ಶುಭಾಂಗಿ, ಬುಗ್ಗೆ, ಮರಗಳು, ಮಳೆ, ಆಲಿಕಲ್ಲು, ಝುರಿ, ದೇವರ ನೆರಳು, ವಚನಧ್ಯಾನ, ಹೊಳೆ, ನಾಟ್ಯೋತ್ಸವ, ವಚನ ಛಾಯೇ, ಕವನ ಸಂಕಲನಗಳು, ಭವಬದುಕು, ನೆನಪಿನ ನೆಂಟರು, ಜಾತಕ ಗದ್ಯಕೃತಿಗಳನ್ನು ಪ್ರಕಟಿಸಿದ್ದಾರೆ.

ಶ್ರೀ ಶಿವಶಂಕರ್ ಅವರು ಸಾಹಿತ್ಯ ಕ್ಷೇತ್ರಗಳಲ್ಲಿ ಸಲ್ಲಿಸಿದ ಅನುಪಮ ಸೇವೆಯನ್ನು ಮನಗಂಡು ಅನೇಕ ಸಂಘ ಸಂಸ್ಥೆಗಳು ಪ್ರಶಸ್ತಿಗಳನ್ನು ನೀಡಿ ಗೌರವಿಸಿದೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ, ಗೊರೂರು ಸಾಹಿತ್ಯ ಪ್ರಶಸ್ತಿ, ಸಾಹಿತ್ಯ ಸೇವಾ ಪ್ರಶಸ್ತಿ, ಚುಟುಕು ರತ್ನ ಪುರಸ್ಕಾರ, ಸರ್. ಎಂ. ವಿಶ್ವೇಸ್ವರಯ್ಯ ಸಾಹಿತ್ಯ ಪ್ರಶಸ್ತಿ, ದಿನಕರ ದೇಸಾಯಿ ಸಾಹಿತ್ಯ ಪ್ರಶಸ್ತಿ, ವಚನ ಸಾಹಿತ್ಯಶ್ರೀ ಪ್ರಶಸ್ತಿ, ಬಸವತತ್ತ್ವ ಪ್ರಚಾರ ಇತ್ಯಾದಿ ಪ್ರಶಸ್ತಿಗಳಿಗೆ ಭಾಜನರಾಗಿದ್ದರು.

ಶ್ರೀ ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು, ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ಬಗ್ಗೆ ಅಪಾರವಾದ ಭಕ್ತಿ ಗೌರವವನ್ನಿಟ್ಟುಕೊಂಡಿದ್ದರು. ಸಿದ್ಧಗಂಗಾ ಮಾಸಪತ್ರಿಕೆಗೆ ಲೇಖನ, ಕವನಗಳನ್ನು ಬರೆಯುವುದರ ಮೂಲಕ ಸಹಕಾರ ನೀಡುತ್ತಿದ್ದರು.

ಮೃತರ ಆತ್ಮಕ್ಕೆ ಚಿರಶಾಂತಿಯನ್ನು, ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಅವರ ಕುಟುಂಬದವರಿಗೆ ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು ಸಿದ್ಧಗಂಗಾ ಶರಣಾಂಜಲಿಯನ್ನು ಅರ್ಪಿಸುತ್ತದೆ.



# ಕಾಯಕ ನಿಷ್ಠೆಯ ಶ್ರೀ ಎಲ್. ರಾಜಪ್ಪನವರು

– ಎಚ್.ಎಸ್. ಸಿದ್ಧಗಂಗಪ್ಪ *



'ಮಾಡುವ ಕೆಲಸದಲ್ಲಿ ಶ್ರದ್ಧೆ, ನಿಷ್ಠೆ, ಸಮಯ ಪರಿಪಾಲನೆ, ಕತೃತ್ವಶಕ್ತಿ, ಬದ್ಧತೆ, ಕ್ರಿಯಾಶೀಲತೆ, ಆತ್ಮವಿಶ್ವಾಸ ಈ ಎಲ್ಲಾ ಗುಣಗಳನ್ನು ಮೈಗೂಡಿಸಿಕೊಂಡು ಒಬ್ಬ ಶ್ರೇಷ್ಠ ಗುತ್ತಿಗೆದಾರರೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದ ಶ್ರೀ ಎಲ್. ರಾಜಪ್ಪನವರು ದಿನಾಂಕ ೮-೪-೨೦೨೧ ರಂದು ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ. ಅವರಿಗೆ ೮೭ ವರ್ಷವಾಗಿತ್ತು.

ಹುಟ್ಟಿದ್ದು ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಕಂಬಾಳಿನಲ್ಲಿ ಸೆಪ್ಟೆಂಬರ್ ೭, ೧೯೩೪ ರಂದು ಶರಣ ದಂಪತಿಗಳಾದ ಶ್ರೀ ಲಿಂಗಪ್ಪ ಮತ್ತು ಶ್ರೀಮತಿ ರೇವಮ್ಮ ಅವರ ಪುತ್ರರಾಗಿ ಜನಿಸಿದರು. ಅವರದು ಸಂಪ್ರದಾಯಸ್ಥ ಕೃಷಿ ಕುಟುಂಬ. ತಂದೆ ತಾಯಿಗಳು ಪ್ರೀತಿಯಿಂದ ಇಟ್ಟ ಹೆಸರು ರಾಜಪ್ಪನೆಂದು. ಮುಂದೆ ಅವರು ಕೈಗೊಳ್ಳುವ ಉದ್ಯಮದಲ್ಲಿ ರಾಜನಾಗಿ ಮೆರೆಯುವಂತನಾಗಲಿ ಎಂದು ಆಶೀರ್ವದಿಸಿದರು. ಅವರ ಆಶಯ, ಹರಕೆ ಸುಳ್ಳಾಗಲಿಲ್ಲ! ಮುಂದೆ ಕಟ್ಟಡ ನಿರ್ಮಾಣ ಕಾರ್ಯದಲ್ಲಿ ತುಂಬಾ ಎತ್ತರಕ್ಕೆ ಬೆಳೆದರು. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ಹುಟ್ಟಿದೂರಿನಲ್ಲಿ ಪಡೆದರೆ, ತ್ಯಾಮಗೊಂಡಲಿನ ಮಾಕನಕುಪ್ಪೆ ತಿಮ್ಮೇಗೌಡ ಪ್ರೌಢಶಾಲೆಯಲ್ಲಿ ಪ್ರೌಢಶಿಕ್ಷಣವನ್ನು ಮುಗಿಸಿದರು. ಸಜ್ಜನಿಕೆ, ಸರಳತೆ, ಸಂಪ್ರದಾಯ, ಆಚಾರ ನಿಷ್ಠೆ ಅವರಿಗೆ ತಂದೆ ತಾಯಿಗಳಿಂದ ಬಂದ ಬಳವಳಿ.

ಕಂಬಾಳಿನಲ್ಲಿ ಜವಳಿ ವ್ಯಾಪಾರ ಮಾಡುವುದರ ಮೂಲಕ ವೃತ್ತಿ ಜೀವನವನ್ನು ಪ್ರಾರಂಭಿಸಿದ ಶ್ರೀ ರಾಜಪ್ಪನವರಿಗೆ ವ್ಯಾಪಾರ ಕೈಹಿಡಿಯಲಿಲ್ಲ. ಸೋದರ ಮಾವಂದಿರಾದ ಶ್ರೀ ಡಿ. ರೇವಣಸಿದ್ಧಪ್ಪ, ಶ್ರೀ ಡಿ. ಚಂದ್ರಶೇಖರಯ್ಯನವರು ಮಾಡುತ್ತಿದ್ದ ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಉಸ್ತುವಾರಿಯಾಗಿ ಸೇರಿಕೊಂಡರು. ಕೆಲವೇ ವರ್ಷಗಳಲ್ಲಿ ತಮ್ಮ ಸೇವಾ ನಿಷ್ಠೆ, ಬದ್ಧತೆಯಿಂದ ಅದರ ಅಳಅಗಲಗಳನ್ನು ಅರ್ಥಮಾಡಿಕೊಂಡರು. ಅನುಭವ ಅವರನ್ನು ಆ ಕ್ಷೇತ್ರದಲ್ಲಿ ಸ್ವತಂತ್ರವಾಗಿ ಮುನ್ನಡೆಯುವಂತೆ ಮಾಡಿತು.

ಶ್ರೀ ರಾಜಪ್ಪನವರು ದಿನಬೆಳಗಾಗುವುದರೊಳಗೆ ಒಬ್ಬ ಸಮರ್ಥ ಗುತ್ತಿಗೆದಾರರಾಗಿ ರೂಪುಗೊಳ್ಳಲಿಲ್ಲ. ಅನೇಕ ಸಮಸ್ಯೆಗಳನ್ನು, ಸವಾಲುಗಳನ್ನು ಎದುರಿಸಿದರು. ಸಾಧನೆಯ ಹಾದಿಯಲ್ಲಿ ಎದುರಾಗುವ ಸಂಕಷ್ಟ ಮತ್ತು ನೋವಿನ ಕ್ಷಣಗಳನ್ನು ಧೈರ್ಯದಿಂದ ಎದುರಿಸಿದಾಗಲೇ ಯಶಸ್ಸು ಕಟ್ಟಿಟ್ಟ ಬುತ್ತಿ ಎಂಬುದನ್ನು ಅನುಭವದಿಂದ ಕಂಡುಕೊಂಡರು. ಪರಿಶುದ್ಧ ಹೃದಯದವರ ಮುಖದ ಮೇಲಿನ ನಗೆಯೆಂದರೆ ಅವರ ವೈರಿಗಳೂ ಕೂಡ ದ್ವೇಷಿಸಲು ಹಿಂಜರಿಯುವಷ್ಟು ದಿವ್ಯವಾದುದೆಂಬುದನ್ನು ತಮ್ಮ ನಡೆತೆಯಿಂದ ತೋರಿಸಿಕೊಟ್ಟರು. ತಾವು ಆರಿಸಿಕೊಂಡ ಕ್ಷೇತ್ರದಲ್ಲಿ ನಿಂತ ನೆಲವನ್ನು ಮರೆಯಲಿಲ್ಲ. ಖುಷಿಯಿಂದ ಹಾರಾಡುತ್ತಿರುವ ಗಾಳಿಪಟದ ನಿಯಂತ್ರಣ ನೆಲದಲ್ಲಿರುವ ಸೂತ್ರದಲ್ಲಿದೆ, ಎತ್ತರಕ್ಕೇರಿದರೂ ನೆಲದ ನೆಂಟು ಮರೆಯಬಾರದು ಎಂಬ ಲೋಕೋಯುಕ್ತಿಯಂತೆ ವ್ಯಕ್ತಿತ್ವವನ್ನು ರೂಪಿಸಿಕೊಂಡರು.

ಯಾವುದೇ ಕೆಲಸ ಮಾಡುವ ಮುನ್ನ ಅವಶ್ಯಕತೆ ಮತ್ತು ಸಾಧ್ಯತೆಗಳನ್ನು ಅಭ್ಯಸಿಸಿ ಮುನ್ನಡಿಯಿಟ್ಟರೆ ಅಸಾಧ್ಯವೆನಿಸಿದ್ದು ಸುಲಭದಲ್ಲಿ ಮುಗಿಯುತ್ತದೆ ಎಂಬುದನ್ನು ಅನುಭವ ಅವರಿಗೆ ಕಲಿಸಿಕೊಟ್ಟಿತು. ಅವರು ವೃತ್ತಿಗೆ ಪಾದರ್ಪಣೆ ಮಾಡಿದಾಗ ತಮ್ಮದೇ ಆದ ಕನಸುಗಳನ್ನು ಕಟ್ಟಿಕೊಂಡಿದ್ದರು. ಆದರೆ ಬದುಕಿನಲ್ಲಿ ಕನಸುಗಳನ್ನು ಕೂಡಿಟ್ಟರೆ ಸಾಲದು, ಅದನ್ನು ನನಸು ಮಾಡಿಕೊಳ್ಳುವ ಮಾರ್ಗವನ್ನು ಪತ್ತೆ ಹಚ್ಚಬೇಕು. ಜೀವನವೆಂಬುದು ಪಯಣವೆನ್ನುವುದೇನೋ ಸರಿ. ಆದರೆ ಅಲ್ಲಿ ಸಿದ್ಧ ನಕಾಶೆ ಇರುವುದಿಲ್ಲ. ತಮ್ಮ ದಾರಿಯನ್ನು ನಾವೇ ಕಂಡುಕೊಳ್ಳುತ್ತಾ ಸಾಗಬೇಕು ಎಂಬ ಅನುಭವಿಗಳ ನುಡಿಗಳು ಅವರಿಗೆ ದಾರಿದೀಪವಾಯಿತು. ಏಕೆಂದರೆ ಸಮರ್ಪಣಾಭಾವ ಮತ್ತು ಬದ್ಧತೆಯಿಂದ ಮಾಡಿದ ಯಾವುದೇ ಕೆಲಸವು ಕನಸನ್ನು ನನಸಾಗಿಸುತ್ತದೆ. ಹಾಗಾದಾಗ ಅಲ್ಲೊಂದು ಧನ್ಯತಾ ಭಾವವೂ ಮೂಡುತ್ತದೆ. ಯಶಸ್ಸೆಂಬುದು ದೂರದ ವಸ್ತು, ಆ ಪಯಣವೇ

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧







ದೀರ್ಘ. ಶ್ರದ್ಧೆ, ಪ್ರಾಮಾಣಿಕತೆ ಬದ್ಧತೆಗಳು ಪಯಣದ ಜತೆಗಾರರಾಗಿದ್ದಾಗ ಗುರಿ ತಲಪಬಹುದು ಎಂಬುದಕ್ಕೆ ಶ್ರೀ ರಾಜಪ್ಪನವರು ನಮಗೆ ನಿದರ್ಶನ ರಾಗಿದ್ದರು. ಶ್ರೀ ರಾಜಪ್ಪನವರ ಯಶಸ್ಸಿನ ಗುಟ್ಟು ಎಂದರೆ ಅವರು ತಮ್ಮೊಂದಿಗೆ ಕೆಲಸ ಮಾಡುವ ಸಿಬ್ಬಂದಿ, ಕೆಲಸಗಾರರ ಮೇಲಿಟ್ಟ ಪ್ರೀತಿ ಅವರ ಸಾಧನೆಯ ಗುಟ್ಟು.

ವಿಶ್ವಾಸ ನಂಬಿಕೆ ಅವರ ಕಷ್ಟಗಳಿಗೆ ಸ್ಪಂದಿಸುವ ಹೃದಯ ವೈಶಾಲ್ಯತೆ ಇವುಗಳಿಂದ ಸಿಬ್ಬಂದಿ ಹಾಗೂ ಕೆಲಸಗಾರರು ನಿಷ್ಠೆ, ಪ್ರಾಮಾಣಿಕತೆ, ಶ್ರದ್ಧೆಯಿಂದ ಕೆಲಸ ಮಾಡಿದ್ದರಿಂದಲೇ ಅವರು ಇಷ್ಟೆಲ್ಲ ಸಾಧನೆ ಮಾಡಲು ಸಾಧ್ಯವಾಯಿತು.

**ಸಾಧನೆಯ ಮೈಲಿಗಲ್ಲುಗಳು :**

ಶ್ರೀ ಎಲ್. ರಾಜಪ್ಪನವರು ತಮ್ಮ ನೇತೃತ್ವದಲ್ಲಿ ಅನೇಕ ಪ್ರತಿಷ್ಠಿತ ಕಟ್ಟಡಗಳನ್ನು ನಿರ್ಮಾಣ ಮಾಡಿದ್ದಾರೆ. ಅವುಗಳಲ್ಲಿ ಕೆಲವನ್ನಾದರೂ ಹೆಸರಿಸುವುದಾದರೆ ಬೆಂಗಳೂರಿನಲ್ಲಿ ರಾಜಭವನದ ಹಿಂಭಾಗದಲ್ಲಿರುವ ಶಾಸಕರ ನೂತನ ಕೊಠಡಿಗಳು, ತುಮಕೂರಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಲ್ಸನ್ ಗಾರ್ಡನ್‌ನಲ್ಲಿ ಸರ್ಕಾರಿ ನೌಕರರಿಗೆ ವಸತಿ ಸಮುಚ್ಚಯ ಕಟ್ಟಡ ನಿರ್ಮಾಣ, ಬೆಂಗಳೂರಿನಲ್ಲಿ ರಾಧಾಬಾಯಿ ದಂತ ಕಾಲೇಜು, ಬೆಂಗಳೂರಿನ ಸರ್ಕಾರಿ ವಿಜ್ಞಾನ ಕಾಲೇಜು, ಮುಖ್ಯಮಂತ್ರಿಗಳ ಗೃಹ ಕಛೇರಿ, ತುಮಕೂರಿನಲ್ಲಿ ಸಿದ್ಧಾರ್ಥ ಮೆಡಿಕಲ್ ಕಾಲೇಜು, ಬಿಜಾಪುರದಲ್ಲಿ ಬಿ.ಎಲ್.ಡಿ. ಎಜುಕೇಷನ್ ಸೊಸೈಟಿಯ ಸಮುಚ್ಚಯ, ಗುಲ್ಬರ್ಗಾದಲ್ಲಿ ಕೆ.ಎಲ್.ಇ. ಸೊಸೈಟಿಯ ವಿದ್ಯಾ ಸಂಸ್ಥೆಗಳು, ದಾವಣಗೆರೆಯಲ್ಲಿ ಉದ್ಯಮಿ ಶ್ರೀ ಶಾಮನೂರು ಶಿವಶಂಕರಪ್ಪನವರ ವಿದ್ಯಾ ಸಂಸ್ಥೆಗಳಿಗೆ ಸಂಬಂಧಿಸಿದ ಕಟ್ಟಡಗಳು, ಬೆಂಗಳೂರು ರಾಜಾಜಿನಗರ ದಲ್ಲಿರುವ ಶ್ರೀ ನಿಜಲಿಂಗಪ್ಪ ಪ್ರಥಮ ದರ್ಜೆ ಕಾಲೇಜು ಕಟ್ಟಡ, ಯಶವಂತಪುರದಲ್ಲಿರುವ ದಂತ ವೈದ್ಯಕೀಯ ಕಾಲೇಜು, ಬೆಂಗಳೂರು ಬಿ.ಡಿ.ಎ. ಬಡಾವಣೆಯಲ್ಲಿ ಕೆ.ಎಲ್.ಇ. ಸೊಸೈಟಿಯ ಕಾನೂನು ಕಾಲೇಜು ಕಟ್ಟಡಗಳ ನಿರ್ಮಾಣ ಇವರ ಕೌಶಲ್ಯಕ್ಕೆ ಹಿಡಿದ ಕನ್ನಡಿ. ಈ ಕಟ್ಟಡಗಳನ್ನು ಸುಸಜ್ಜಿತವಾಗಿ ನಿರ್ಮಾಣ ಮಾಡಿ ಕೊಡುವುದರ ಮೂಲಕ ಒಬ್ಬ ಪ್ರತಿಭಾವಂತ ಇಂಜಿನಿಯರ್ ಪದವಿಧರನಿಗಿಂತ ಕಡಿಮೆಯಿಲ್ಲ ಎಂಬುದನ್ನು ಸಾಬೀತುಪಡಿಸಿದುದು ಅವರ ಅನುಭವ ಹಾಗೂ ಕತೃತ್ವ ಶಕ್ತಿಯ ದ್ಯೋತಕ. ಶ್ರೀ ರಾಜಪ್ಪನವರು ಮಾಡಿರುವ ಕೆಲಸವನ್ನು ಗಮನಿಸಿದಾಗ ಯಶಸ್ಸೆಂದರೆ ವಹಿಸಿದ ಕೆಲಸವನ್ನು ಮುಗಿಸುವುದಷ್ಟೇ ಅಲ್ಲ, ಅದು ಯಾರಿಂದಲೂ ಇಷ್ಟು ಅಚ್ಚುಕಟ್ಟಾಗಿ ಮಾಡಲು ಸಾಧ್ಯವಿಲ್ಲವಾಗಿತ್ತು ಅನ್ನುವ ರೀತಿಯಲ್ಲಿರಬೇಕು ಎಂಬುದನ್ನು ಅವರು ಕಟ್ಟಿಸಿದ ಕಟ್ಟಡಗಳನ್ನು ನೋಡಿದಾಗ ಅರಿವಾಗುತ್ತದೆ.

ಶ್ರೀ ರಾಜಪ್ಪನವರು ಶ್ರೀ ಸಿದ್ಧಗಂಗಾ ಮಠ ಹಾಗೂ ತ್ರಿವಿಧ ದಾಸೋಹಿ, ವೈರಾಗ್ಯಮೂರ್ತಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಹಾಗೂ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಬಗ್ಗೆ ಅನನ್ಯವಾದ ಭಕ್ತಿ, ಗೌರವವನ್ನಿಟ್ಟುಕೊಂಡಿದ್ದರು. ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಗೌರ್‍ನಿಂಗ್ ಕೌನ್ಸಿಲ್ ಸದಸ್ಯರಾಗಿ ಅನೇಕ ಉಪಯುಕ್ತ ಸಲಹೆಗಳನ್ನು ನೀಡುತ್ತಿದ್ದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದು.

**ವಿವಿಧ ಸಂಘ ಸಂಸ್ಥೆಗಳಲ್ಲಿ** : ಶ್ರೀ ರಾಜಪ್ಪನವರು ಕೀರ್ತಿ, ಅಧಿಕಾರದಿಂದ ದೂರ ಇದ್ದವರು. ಅವರು ತಾವಾಯಿತು ತಮ್ಮ ಕಾಯಕವಾಯಿತು. ಅವರದು ಸ್ಥಿತಪ್ರಜ್ಞತ್ವವನ್ನು ಮೊದಲಿನಿಂದಲೂ ಕಾಪಾಡಿಕೊಂಡು ಬಂದಿದ್ದರು. ಆದರೂ ಶ್ರೀ ಸಿದ್ಧಗಂಗಾ ಮಠವೂ ಸೇರಿದಂತೆ ಅನೇಕ ಸಂಘ ಸಂಸ್ಥೆಗಳು ಅವರ ಅನುಭವ, ಸೇವೆಯನ್ನು ಬಳಸಿಕೊಳ್ಳುವ ದೃಷ್ಟಿಯಿಂದ ತಮ್ಮ ಸಂಸ್ಥೆಗಳೀಗೆ ಸದಸ್ಯರನ್ನಾಗಿ ಮಾಡಿಕೊಂಡಿದ್ದರು. ಶ್ರೀ ರಾಜಪ್ಪನವರು ರಾಜ್ಯ ಕಂಟ್ರಾಕ್ಟರ್ ಅಸೋಷಿಯೇಷನ್ ಅಧ್ಯಕ್ಷರಾಗಿ, ಕೆ.ಎಲ್.ಇ. ಸೊಸೈಟಿ, ಬಿ.ಎಲ್.ಡಿ. ಸೊಸೈಟಿ ಸದಸ್ಯರಾಗಿ, ವೀರಶೈವ ಸಹಕಾರಿ ಬ್ಯಾಂಕಿನ ಕಾರ್ಯದರ್ಶಿಯಾಗಿ, ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆಯ ಸದಸ್ಯರಾಗಿ, ಉಪಾಧ್ಯಕ್ಷರಾಗಿ ನಿಸ್ವಾರ್ಥ, ಪ್ರಾಮಾಣಿತೆಯಿಂದ ಸೇವೆ ಸಲ್ಲಿಸಿ, ಆಯಾ ಸ್ಥಾನಗಳಿಗೆ ಘನತೆ, ಗೌರವವನ್ನು ತಂದುಕೊಟ್ಟಿದ್ದರು.

ಶ್ರೀ ರಾಜಪ್ಪನವರು ನಿರ್ಮಾಣ ಕ್ಷೇತ್ರದಲ್ಲಿ ಸಲ್ಲಿಸಿದ ಗಣನೀಯ ಸೇವೆಯನ್ನು ಗುರುತಿಸಿ ಶ್ರೀ ಸಿದ್ಧಗಂಗಾ ಮಠವೂ ಸೇರಿದಂತೆ ಅನೇಕ ಸಂಘ ಸಂಸ್ಥೆಗಳು, ಮಠ ಮಾನ್ಯಗಳು ಸನ್ಮಾನಿಸಿ ಗೌರವಿಸಿವೆ.

ಶ್ರೀ ಎಲ್. ರಾಜಪ್ಪನವರು ಇಂದು ಭೌತಿಕವಾಗಿ ನಮ್ಮ ಮುಂದೆ ಇಲ್ಲದೇ ಹೋದರೂ ಅವರು ನಿರ್ಮಾಣ ಮಾಡಿದ ಕಟ್ಟಡಗಳು ಇರುವ ತನಕ ಅವರ ಸೇವೆಯ ನೆನೆಪಿರುತ್ತದೆ.

ಶ್ರೀ ಎಲ್. ರಾಜಪ್ಪನವರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಅವರ ಕುಟುಂಬದವರಿಗೆ ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ ಹಾಗೂ ಶ್ರದ್ಧೆಯನ್ನು ಅರ್ಪಿಸುತ್ತದೆ.







ಲೇಖನ

# ಶರಣರ ವಚನಗಳಲ್ಲಿ ಜಗತ್ತಿನ ಮೂಲ ಹಾಗೂ ಜೈವಿಕ ವಿವಿಧತೆ

– ಡಾ . ಸಿ.ಎಸ್. ಪಾಟೀಲ *

ಸಕಲರನ್ನು ಸರ್ವ ಸಮಾನತೆಯ ಭಾವದಿಂದ ಕಂಡ ಅಣ್ಣ ಬಸವಣ್ಣ ವಿಶ್ವದ ಬೆಳಕಾಗಿ ಕಾಯಕ ಯೋಗದ ಕರ್ಮಚಾರಿಯಾಗಿ, ಕಿಂಕರತ್ವದಲ್ಲಿ ಕಿಂಕರರಾಗಿ ಕಲ್ಯಾಣ ನಾಡಿನ ತೇಜ:ಪುಂಜವಾಗಿ ತಮ್ಮನ್ನು ತಾವು ಬೆಳಗಿಸಿಕೊಂಡರು. ತೆಗಳಿದವರು ನನ್ನವರು, ಹೊಗಳಿದವರು ನನ್ನವರು ಎಂಬ ಭಾವನೆಯಿಂದ "ಸರ್ವೇ ಜನಾ ಸುಖಿನೋ ಭವಂತು" ಎನ್ನುವಂತೆ ಜಗದ ಶಕ್ತಿಯಾಗಿ, ಯುಗದ ಶಕ್ತಿಯಾಗಿ ಮಹಾತ್ಮರಾಗಿ ಬೆಳೆದರು. ಇಂತಹ ಮಹಾತ್ಮರನ್ನು ನೆನೆಯುತ್ತಾ ಅವರ ವಚನಗಳ ಹೂರಣವನ್ನು ಸವಿಯುತ್ತ ಉತ್ತಮ ಬಾಳನ್ನು ರೂಪಿಸಿಕೊಳ್ಳುವುದು ಮಾನವ ಧರ್ಮದ ಆದ್ಯ ಕರ್ತವ್ಯ. ವಿಶ್ವಸಾಹಿತ್ಯದಲ್ಲಿ ವಚನ ಸಾಹಿತ್ಯವು ಪರಮೋಚ್ಚ ಸ್ಥಾನ ಅಲಂಕರಿಸಿದೆ. ಈ ವಚನ ಸಾಯಿತ್ಯವು ಪ್ರತಿಯೊಬ್ಬರ ಸಂಸಾರ ಸಾರೋದಯ, ಬಾಳಿನ ಬುತ್ತಿಯು ಆಗಿದೆ. ಅಂದಿನ ಅನುಭವ ಮಂಟಪ ಪ್ರಜಾಸತ್ತೆಯ ಪ್ರಥಮ ಪಾರ್ಲಿಮೆಂಟಿನ ಸಂಕೇತವಾಗಿತ್ತೆಂದು ಹೇಳಿದ ಬಲ್ಲವರ ಮಾತು ನಿತ್ಯ ಸತ್ಯ.

ವಚನಗಳಲ್ಲಿ ಕಥೆಯಿಲ್ಲ, ವಿಚಾರವಿದೆ. ಕಾವ್ಯಗಳಲಿ ಕರ್ತೃತ್ವವಿದೆ. ಸಾಮಾಜಿಕ ಸಮಾನತೆ, ವರ್ಗ ಬೇಧದ ವಿರೋಧ ನೀತಿ, ಸೃಜನಶೀಲತೆ, ಕಾಯಕ ತತ್ತ್ವ, ಪ್ರಜಾಪ್ರಭುತ್ವವಾದಿ ನೀತಿ – ಇದೆಲ್ಲಕ್ಕೂ ಮಿಗಿಲಾಗಿ ವೈಜ್ಞಾನಿಕ ಮತ್ತು ವೈಚಾರಿಕತೆಯ ಚಿಂತನ–ಮಂಥನ ವಚನ ರೂಪದಲ್ಲಿ ಹೊರಹೊಮ್ಮಿಸಿರುವುದು ೧೨ ನೇ ಶತಮಾನದ ಶಿವಶರಣರ ಮಹತ್ತರ ಕೊಡುಗೆ. ಅಂದು ಮಾಂತ್ರಿಕ ಮೌಢ್ಯತೆ ಇತ್ತು. ಯಾಂತ್ರಿಕತೆಯ ಯುಗವಾಗಿರಲಿಲ್ಲ. ತಾಂತ್ರಿಕತೆಯ ತಂತ್ರವು ಅಲ್ಲಿರಲಿಲ್ಲ. ವೈಚಾರಿಕತೆಯಿಂದ ಮೌಢ್ಯತೆಯ ಮೂಲವನ್ನು ಕಿತ್ತೊಗೆದು, ವೈಜ್ಞಾನಿಕ ತಳಹದಿಯನ್ನು ವಚನ ರೂಪದಲ್ಲಿ ಹಾಕಿದವರು ಅಂದಿನ ಶಿವಶರಣರು. ಅವರು ಪ್ರಕೃತಿ ಪ್ರಿಯರು, ಜೀವಜಗತ್ತಿನ ದಯಾಪಾಲಕರು. ನಿರ್ಜೀವ ಜಗತ್ತಿನ ಸಂರಕ್ಷಕರಾಗಿ ವಚನ ರೂಪದಲ್ಲಿ ಉಪದೇಶ ನೀಡಿದ್ದಾರೆ.

ಅಂತರಂಗ – ಬಹಿರಂಗ ಇವೆರಡಕ್ಕೂ ಇರುವ ಸಾಮರಸ್ಯವನ್ನು ಬಹು ಮಾರ್ಮಿಕವಾಗಿ ವರ್ಣಿಸಿದ್ದಾರೆ. ಆತ್ಮವಿಲ್ಲದ ದೇಹ ಪ್ರಯೋಜನಕ್ಕೆಬಾರದು. ಅಂದರೆ ಜೀವವಿಲ್ಲದ ಈ ಶರೀರ ತಟಸ್ಥವಾಗಿರುವವು . ಚಂಚಲ ಸ್ವಭಾವದ ಮನಸ್ಸಿಗೆ ಜೀವ ವೈವಿಧ್ಯದ ಆಧಾರವಾಗಿಟ್ಟುಕೊಂಡು ಕೊಟ್ಟ ವಿವರಣೆ ಹೀಗಿದೆ:

**ಓತಿ ಬೇಲಿ ಪರಿವಂತೆ ಎನ್ನ ಮನವಯ್ಯಾ,**
**ಹೊತ್ತಿಗೊಂದು ಪರಿಯಪ್ಪ ಗೋಸುಂಬೆಯಂತೆನ್ನ ಮನವು,**
**ಬಾವುಲ ಬಾಳುವೆಯಂತೆನ್ನ ಮನವು.**
**ನಡುವಿರುಳೆಲೆದ್ದ ಕುರುಡಂಗೆ ಅಗುಸೆಯಲ್ಲಿ ಬೆಳಗಾದಂತೆ**
**ನಾನಿಲ್ಲದ ಭಕ್ತಿಯ ಬಯಸಿದಡುಂಟೆ**
**ಕೂಡಲಸಂಗಮದೇವಾ?**

ಪರಿಚಿತ ಪ್ರಾಣಿ ಪ್ರಪಂಚದ ಬಗ್ಗೆ ಮನಸ್ಸನ್ನು ಹೋಲಿಸಿ ಉಲ್ಲೇಖ ಮಾಡಿರುವುದು ಜೀವ ವೈವಿಧ್ಯತೆಯ ಕುರುಹು. ಓತಿಕ್ಯಾತ, ಬಾವಲಿ, ಗೋಸುಂಬೆ ಇವುಗಳ ಚಲನವಲನ ವಿಚಿತ್ರವಾದದ್ದು. ಓತಿಕ್ಯಾತ ಒಂದು ಕಡೆ ನಿಲ್ಲುವುದಿಲ್ಲ. ಬೇಲಿಯಿಂದ ಬೇಲಿಗೆ ಜಿಗಿಯುತ್ತದೆ. ಗೋಸುಂಬೆ ಕ್ಷಣ ಕ್ಷಣಕ್ಕೊಮ್ಮೆ ಬಣ್ಣ ಬದಲಿಸುತ್ತದೆ. ಬಾವಲಿಯು ಕಾಲು ಮೇಲೆ ಮಾಡಿ ತಲೆ ಕೆಳಗಾಗಿ ತೂಗಾಡುತ್ತಿರುತ್ತದೆ. ಇದೊಂದು ವಿಚಿತ್ರ ಪ್ರಾಣಿ. ತಿನ್ನುವ ಬಾಯಿಂದಲೇ ಮಲವನ್ನು ವಿಸರ್ಜಿಸುತ್ತದೆ. ಇದು ಇರುವ ಕಡೆ ದುರ್ಗಂಧದ ದುರ್ವಾಸನೆ ಇರುತ್ತದೆ. ಇವುಗಳ ಜೊತೆಗೆ ಅಣ್ಣ ಬಸವಣ್ಣನವರು ಮಾನವನಿಗೆ ಸಂಬಂಧಿಸಿದ ಉದಾಹರಣೆಯನ್ನು ತೆಗೆದುಕೊಂಡಿದ್ದಾರೆ. ಮಧ್ಯರಾತ್ರಿ ಎದ್ದ ಕುರುಡನು ನಿರ್ದಿಷ್ಟ ಸ್ಥಳವನ್ನು ಮುಟ್ಟಲು ತಡವರಿಸುತ್ತಾ ಮುಂದೆ ಸಾಗುವನು. ಅವನು ಕುರುಡನಿದ್ದ ಕಾರಣ ತಾನು ಮುಟ್ಟಬೇಕೆಂಬ ಸ್ಥಳಕ್ಕೆ ಹೋಗಲಾರದೆ ಬೇರೆ ಸ್ಥಳಕ್ಕೆ ಹೋಗಿ ತನ್ನ ಉದ್ದೇಶ, ಶ್ರಮ ವ್ಯರ್ಥಗೊಳಿಸುವನು. ಇಲ್ಲಿ ಕುರುಡನ ರೂಪದಲ್ಲಿ ಚಂಚಲ ಮನಸ್ಸಿನ ಹಾಗೂ ಅದರ ನಿರರ್ಥಕತೆಯ ಸ್ಪಷ್ಟ ಚಿತ್ರಣವಿದೆ. ಚಂಚಲ ಮನವಿದ್ದ ಭಕ್ತಿ ಶಿವನಿಗೆ ಒಪ್ಪುವುದಿಲ್ಲ.

* ಹಿರಿಯ ಲೇಖಕರು, ಬೀದರ್

ಈ ಪ್ರಪಂಚದಲ್ಲಿ ವಸ್ತುಗಳನ್ನು ಮೂರು ವಿಧದಲ್ಲಿ ಕಾಣಬಹುದು. ಘನ, ಜಲ ಮತ್ತು ವಾಯು ರೂಪದಲ್ಲಿ. ಭೌತಿಕವಾಗಿ ಘನ ಮತ್ತು ಜಲವನ್ನು ಗುರುತಿಸುತ್ತೇವೆ. ವಾಯು ಮಾತ್ರ ಸ್ಪರ್ಶದಿಂದ ಅನುಭವಿಸುತ್ತೇವೆ. ಭೌತಿಕವಾದ ಯಾವುದೇ ವಸ್ತು(mass Conscious State)ವಿರಲಿ ಅದರಲ್ಲಿ ಜೊತೆಯಲ್ಲಿ ಶಕ್ತಿ (energy) ಒಳಗೊಂಡಿರುತ್ತದೆ. ಇದನ್ನು ಶಿವ ಮತ್ತು ಶಕ್ತಿಯ ಅವಿನಾಭಾವ ಸಂಬಂಧವೆಂದು ಅರ್ಥೈಸುತ್ತೇವೆ. ಇದರ ಜೊತೆಗೆ ಅರಿವು (conscious state) ಸಹ ಇರುತ್ತದೆ. ಇಲ್ಲಿ ವೈಜ್ಞಾನಿಕವಾಗಿ ವಸ್ತು, ಶಕ್ತಿ ಮತ್ತು ಅರಿವು ಈ ಮೂರನ್ನು ಸೇರಿಸಿಕೊಂಡು ಅಧ್ಯಯನ ಮಾಡುತ್ತೇವೆ.

ಈ ಅರಿವಿನ ಹರಿವನ್ನು ಅಧ್ಯಯನ ಮಾಡುವುದೇ ಆಧ್ಯಾತ್ಮಿಕತೆಯ ಪರಿಧಿ. ಆಧ್ಯಾತ್ಮಿಕವಾಗಿ ಸೃಷ್ಟಿ ಕ್ರಮದಲ್ಲಿ ಗುರುವಿನಿಂದ ಲಿಂಗ, ಲಿಂಗದಿಂದ ಜಂಗಮ ಮತ್ತು ಜೀವಾತ್ಮವೂ ಸಹಿತ ಬಂದಿದೆ. ಲಿಂಗತತ್ತ್ವದ ಶುದ್ಧ ಸ್ವರೂಪದ ಅರಿವೇ ಜಂಗಮವಾಗಿದೆ. ಅದೇ ಲಿಂಗತತ್ತ್ವದ ಅಶುದ್ಧ ಸ್ವರೂಪದ ಅರಿವೇ ಜೀವಾತ್ಮ. ಇಲ್ಲಿ ನಿರಾಕಾರ ಲಿಂಗ ತತ್ತ್ವದ ಅಪ್ರಕಟಿತ ಶಕ್ತಿ ಪ್ರಕಟಗೊಳ್ಳುತ್ತದೆ. ಈ ಅಪ್ರಕಟಿತ ಲಿಂಗವು ಪ್ರಕಟಗೊಂಡಾಗ ಅನಾದಿ ಸ್ಥಿತಿಯು ಆದಿಯಾಗಿ ಉತ್ಪತ್ತಿಯಾಗುವುದೇ "ದೈವಿಕಣ." ಇದನ್ನು (Big Bang) ಬಿಗ್ ಬ್ಯಾಂಗ ಸಿದ್ಧಾಂತವೆಂದು ಗುರುತಿಸಲಾಗಿದೆ. ಈ ದೈವಿಕಣಗಳು ತಕ್ಷಣವೇ ಸ್ಫೋಟಗೊಂಡು ಅನೇಕ ರೀತಿಯ ಮೂಲಭೂತ ಕಣವಾಗಿ ಪರಿವರ್ತನೆಗೊಂಡಿವೆ.

ಈ ದೈವಿಕಣಗಳ ಜ್ಞಾನ ಸೃಷ್ಟಿರಹಸ್ಯದ ಕೀಲಿಕೈಯಾಗಿದೆ. ಇದನ್ನು ಮೊಟ್ಟಮೊದಲಿಗೆ ಬೆಳಕಿಗೆ ತಂದವರು ಭಾರತೀಯ ಸಂಜಾತ ಸತ್ಯೇಂದ್ರನಾಥ ಬೋಸರವರು. ಇದನ್ನು ಇತ್ತೀಚೆಗೆ ಇಂಗ್ಲೇಂಡ ವಿಜ್ಞಾನಿ ಪೀಟರ್ ಹಿಗ್ಸ್ ಸ್ವತಂತ್ರವಾಗಿ ಬೆಳಕಿಗೆ ತಂದರು. ಈ ಅಭೂತಪೂರ್ವ ಯಶಸ್ಸಿಗಾಗಿ ಈ ದೈವಿಕಣಗಳನ್ನು ಹಿಗ್ಸ ಬೋಸಾನ ಕಣಗಳೆಂದು ಹೆಸರಿಸಲಾಗಿದೆ. ಈ ದೈವಿಕಣಗಳ ಪತ್ತೆಗೆ ೨೦೧೦ ರ ಜಿನೀವಾದಲ್ಲಿ ಹೈಡ್ರಾನ್ ಕ್ಲೊಲಾಯಿಡರ್ ಆಕ್ಸಿಲೇಟರ (Hydran Collider Accilator) ಸುಮಾರು ೫೦೦೦ ಕೋಟಿ ರೂಪಾಯಿಗಳ ವೆಚ್ಚದಲ್ಲಿ ಇದನ್ನು ನಿರ್ಮಿಸಿ, ಭೂಮಿಯ ಕೆಳಗಡೆ ಅಳವಡಿಸಿ ದೈವಿಕಣಗಳನ್ನು ಪತ್ತೆ ಮಾಡಲಾಗಿದೆ. ಈ ವಿಚಾರದಲ್ಲಿ ಭೌತವಿಜ್ಞಾನವು ಈ ಸೃಷ್ಟಿ ರಹಸ್ಯವನ್ನು ವಸ್ತು ಮತ್ತು ಶಕ್ತಿಗಳ ಸ್ವರೂಪದಲ್ಲಿ ವಿವರಿಸುತ್ತದೆ. ಆಧ್ಯಾತ್ಮ ಜ್ಞಾನವು ಇದೇ ಸೃಷ್ಟಿಯ ರಹಸ್ಯವನ್ನು ವಸ್ತು, ಶಕ್ತಿ ಮತ್ತು ಅರಿವಿನೊಳಗೂಡಿ ವಿವರಿಸಲು ಪ್ರಯತ್ನಿಸುತ್ತವೆ.

ಅಣ್ಣನವರು ಹೇಳುವಂತೆ ಸ್ವಾಮಿ ಶಾಶ್ವತ ನೀನು. ಇಲ್ಲಿ ಬರುವ ಮಹಾದೇವ. ಇಲ್ಲಿಂದ ಮೇಲೆ ಶಬ್ಧ ತರಂಗಗಳನ್ನು ದಾಟಿ ಮುಂದೆ ಬೆಳಕಿನ ತರಂಗಗಳ ಅನುಭವವಿದೆ ಎಂಬ ಅರ್ಥವಾಗುತ್ತದೆ. ಅಂದರೆ ಈ ಸ್ಥಿತಿಯನ್ನು "ಬೆಳಗಿನೊಳಗಣ ಮಹಾಬೆಳಗು", "ಮಹಾ ಬೆಳಗಿನ ಬೆಳಗಿನೊಳಗಿದ್ದನೆಂಬ ಶಬ್ದ, ಮುಗ್ಧವಾದುದೆಂಬೆನಯ್ಯಾ." ಈ ದೈವಿಕಣಗಳ ಸಂಬಂಧಿತ ವಸ್ತು, ಶಕ್ತಿಯನ್ನು ಗುರುತಿಸಬಹುದಾಗಿದೆ. ಇವುಗಳ ಸ್ವರೂಪ ವನ್ನು ಕೇವಲ ಗಣಕ ಯಂತ್ರದ ಕಾರ್ಯವೈಖರಿಯಿಂದ ಕಂಡುಹಿಡಿಯಬಹುದಾಗಿದೆ. ಇಲ್ಲಿ ವಸ್ತುಸ್ಥಿತಿಯನ್ನು ಪಿರಾಡಿಕ್ ಟೇಬಲ್‌ನಿಂದ ಕಂಡುಹಿಡಿಯಲು ಸಾಧ್ಯವಾಗಿತ್ತು. ಅನೇಕ ವಿಷಯಗಳ ಮಾಹಿತಿಗೆ ಖಚಿತವಾದ ರಾಸಾಯನಿಕ ಜ್ಞಾನ ಬೇಕಾಗುತ್ತದೆ.

ಇಂದು ಈ ಪ್ರಪಂಚ ಉತ್ಪತ್ತಿಯ ಮೂರು ಮೂಲ ವಸ್ತುಗಳಿಂದಲೇ ಚೈತನ್ಯ (mass), ಶಕ್ತಿ (energy), ಅರಿವು (Conscious State). ಇಲ್ಲಿ ಶಕ್ತಿ ತನ್ನನ್ನು ತಾನು ಕಂಡುಕೊಳ್ಳುವುದು. ಭಕ್ತಿ ತನ್ನನ್ನು ತಾನು ಅರಿಯುವುದು. ಮುಕ್ತಿ ತನ್ನನ್ನು ತಾನು ಇಲ್ಲವಾಗಿಸಿಕೊಳ್ಳುವುದು. ಹಿಂದಿನ ಮುಂದಿನ ವಿಷಯಗಳ ಸರಮಾಲೆಗಿಂತ ನಾವು ಅನುಭವಿಸುವ ಅನುಭವವೇ ನಮಗೆ ಮಾರ್ಗದರ್ಶನವಾಗುವಾಗ ವಾಸ್ತವ್ಯ ವನ್ನು ಸತ್ಯದ ಅರಿವನ್ನು ಅನುಭವಕ್ಕೆ ತಂದುಕೊಳ್ಳುವುದು ಮಾನವ ಜನಾಂಗದ ಪ್ರಮಾಣದ ಕುರುಹು.

'ಮರೆದೊಡೆ ಮಾನವ ಅರಿದೊಡೆ ಶರಣ – ಶರಣ ಅರಿದೊಡೆ ದೇವ.'

"ದಯವಿಲ್ಲದ ಧರ್ಮವಾವುದಯ್ಯಾ ದಯೆವಿರಬೇಕು ಸಕಲ ಪ್ರಾಣಿಗಳಲ್ಲಿ. ದಯವೇ ಧರ್ಮದ ಮೂಲವಯ್ಯಾ" ಸರ್ವ ಧರ್ಮಗಳಿಗೆ ಮೂಲ ಸ್ತಂಭ ದಯೆಯು. ಈ ಸಮಾಜದಲ್ಲಿ ಭಾಷೆ, ಜನಾಂಗ ಹಾಗೂ ಕ್ರಾಂತಿಯ ಭಾಷೆಯಲ್ಲಿ ಅನೇಕ ದಾರ್ಶನಿಕರು ಉದಯಿಸಿ ಧರ್ಮದ ಬೆಳೆಯನ್ನು ಬೆಳೆದಿದ್ದಾರೆ. ದಯವಿಲ್ಲದ ಧರ್ಮ ಬೇರಿಲ್ಲದ ವೃಕ್ಷದಂತೆ. ಈ ಪೃಥ್ವಿಯಲ್ಲಿ ಸೃಷ್ಟಿಯಾಗಿರುವ ಚರಾಚರ ಜೀವರಾಶಿಗಳಿಗೆ ಬದುಕುವ ಹಕ್ಕಿದೆ. ಅದರಿಂದ ಬಸವ ತತ್ತ್ವದ ವ್ಯಾಖ್ಯೆಯು ಜೀವಿಗಳ ಬದುಕುವ ಹಕ್ಕನ್ನು ಪ್ರತಿಪಾದಿಸುವ ಧರ್ಮವಾಗಿದೆ. ಈ ಧರ್ಮವೃಕ್ಷದ ಮೂಲ ಬೇರು ದಯೆ. ಸದೃಢವಾದ ದಯೆಯಿಂದ ಧರ್ಮ ವೃಕ್ಷವು ಶ್ರೇಷ್ಠ ಫಲವನ್ನು ಸಮಾಜಕ್ಕೆ ಒದಗಿಸುತ್ತದೆ. ಆದಕಾರಣ ದಯೆ ಮೂಲವಾದ ಧರ್ಮವಾಗಿರಬೇಕು ಬಸವ ತತ್ತ್ವದ ೧೨ ಸೂತ್ರಗಳ ನೆಲೆ ಮತ್ತು ಕಲೆಯಿಂದ ವೈಜ್ಞಾನಿಕ ಜೀವನದ ವೈಚಾರಿಕ ತತ್ತ್ವದ ಸಮಾಜ ನಿರ್ಮಾಣವಾಗುತ್ತದೆ.

ವಚನಗಳಲ್ಲಿ ಆಚರಣೆಯಿಂದ ಅನುಕರಣೆಯವರೆಗೂ ಮಾನವ ಜೀವನದ ಸೈದ್ಧಾಂತಿಕ ನೆಲೆಗಟ್ಟಿನ ಸಾಮಾಜಿಕ



ಬದುಕು ಮತ್ತು ಬದುಕುವುದಕ್ಕೆ ಬೇಕಾಗುವ ಅರಿವು ಮತ್ತು ಇರುವ ಇವುಗಳ ಮೂಲಭೂತ ತತ್ತ್ವಗಳ ವಿಶ್ಲೇಷಣೆಯ ಸಾರವೇ ಅಡಗಿದೆ. ಈ ತತ್ತ್ವಗಳ ಹಿನ್ನಲೆಯ ಶರಣ ಸಂಸ್ಕೃತಿಯನ್ನು ಉಳಿಸುವ, ಬೆಳೆಸುವ ಮತ್ತು ರಕ್ಷಿಸುವ ಜವಾಬ್ದಾರಿ ಮಾನವ ಜನಾಂಗಕ್ಕೆ ಬೇಕಾಗಿದೆ. ಇಲ್ಲಿ ಅನುಭವ ಮತ್ತು ಅನುಭಾವ ಎರಡೂ ಇವೆ. ತತ್ತ್ವಾದರ್ಶಗಳು ಇವೆ. ವೈಚಾರಿಕತೆಯ ವಿಚಾರಗಳು ಇವೆ. ವೈಜ್ಞಾನಿಕತೆಯ ನೆಲೆಗಟ್ಟು ಇಲ್ಲಿದೆ.

ಮಾನವನ ಬದುಕಿಗೆ ಬೇಕಾಗುವ ರೋಟಿ, ಕಪಡಾ, ಮಕಾನ, ಶಿಕ್ಷಾ, ದವಾ – ಇವುಗಳನ್ನು ಪಂಚಮೂಲ ತತ್ತ್ವಗಳನ್ನಾಗಿ ಸ್ವೀಕರಿಸಲಾಗಿದೆ. ಇರುವುದಕ್ಕೊಂದು ಸೂರು ಅಂದರೆ ಮನೆ ಅವಶ್ಯಕ. ಅದು ಚಿಕ್ಕದಿರಲಿ ದೊಡ್ಡದಿರಲಿ ಮಹಲಾಗಿರಲಿ ಮನೆಯೊಂದಿದ್ದರೆ ಸಾಕು. ಅದಕ್ಕಿಂತ ದೊಡ್ಡದಾದ ಮನಸ್ಸಿರಬೇಕು. ಅದಕ್ಕೆ ಅಣ್ಣನವರು ಪ್ರಸ್ತುತವಾಗಿ ವಿವರಿಸಿರುವರು –

**ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ?**
**ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ**
**ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ?**
**ತನುವಿನೊಳಗೆ ಹುಸಿ ತುಂಬಿ ಮನದೊಳಗೆ ವಿಷಯ ತುಂಬಿ**
**ಮನೆಯೊಳಗೆ ಮನೆಯೊಡೆಯ ಇಲ್ಲ**
**ಕೂಡಲ ಸಂಗಮದೇವಾ.**

ಇಂದು ನಗರಗಳಲ್ಲಿ ಮನೆಯ ದ್ವಾರಕ್ಕೆ (Beware of Dogs) ನಾಯಿಗಳಿಗೆ ಎಚ್ಚರಿಕೆ ಎನ್ನುವ ಫಲಕ ಹಾಕಿರುತ್ತಾರೆ. ನೋಡಿದಾಕ್ಷಣ ಪ್ರವೇಶ ಮಾಡಲು ಅಗುವುದಿಲ್ಲ. ಅದರ ಜೊತೆಗೆ 'ಶರಣು ಬನ್ನಿ' ಎಂದರೆ ಸಂತಸದಿಂದ ಒಳಗೆ ಹೋಗಬಹುದು. ಮನೆಯ ಒಳಗಡೆ ಮನವನ್ನು ವಿಕಾಸಗೊಳಿಸುವ ಶರಣರ, ಸಂತರ, ಮಹಾತ್ಮರ, ದೇಶಭಕ್ತರ, ವಿಜ್ಞಾನಿಗಳ ಚಿತ್ರಗಳು ಸೃಷ್ಟಿ ಸೌಂದರ್ಯ ಬೀರುವ ದೃಶ್ಯಗಳು ಇದ್ದರೆ ಮನಕ್ಕೆ ಶಾಂತಿ ಸಮಾಧಾನ ಸಿಗುತ್ತದೆ. ಮಲಗುವ ಕೋಣೆಯಲ್ಲಿ ಶರಣರ ಚಿತ್ರವಿದ್ದರೆ ಸುಖ ನಿದ್ರೆ; ಕಣ್ಣು ತೆರೆದ ಕೂಡಲೇ ಶರಣರ ದರ್ಶನ. "ಎನಗೆ ನಿಮ್ಮ ನೆನೆದಾಗಲೆ ಉದಯ" ಎನ್ನುವಂತೆ ಚೈತನ್ಯಭರಿತ ಮತ್ತು ಸ್ಫೂರ್ತಿದಾಯಕ ದಿನ ಅದಾಗುವುದು.

ವಚನಕಾರರು ತಮ್ಮ ಸುತ್ತಲಿನ ಪರಿಸರವನ್ನು ಹಿತದೃಷ್ಟಿಯಿಂದ ಕಂಡಿರುವುದು ಬಹುಶಃ ಅವರನ್ನು ಪರಿಸರ ಪ್ರಿಯರೆಂದೇ ಕರೆಯಬಹುದು. ತಮ್ಮ ದಾರ್ಶನಿಕ ಶಕ್ತಿಯಿಂದ ಶಿವಶರಣರು ತಮ್ಮದೇ ಆದಂತಹ ಸಿದ್ಧಾಂತಗಳನ್ನು ವಚನ ರೂಪದಲ್ಲಿ ಪ್ರಕಟಿಸಿದ್ದಾರೆ. ಶಿವಶರಣ ಮೋಳಿಗೆ ಮಾರಯ್ಯನವರು ಪಂಚಭೂತ ಹುಟ್ಟುವುದಕ್ಕಿಂತ ಪೂರ್ವದಲ್ಲಿ ಬ್ರಹ್ಮಾಂಡವೆಲ್ಲಿತ್ತು? ಎಂದು ಪ್ರಶ್ನಿಸಿದ್ದಾರೆ.

**ಪೃಥ್ವಿ, ವಾಯು, ಆಕಾಶ ತಲೆದೊರುವ ಮುನ್ನವೇ**
**ಬ್ರಹ್ಮಾಂಡವೆಲ್ಲಿ ಆಯಿತು ? ವಿಷ್ಣು ಚೇತನವೆಲ್ಲಿ ಹುಟ್ಟಿತ್ತು ?**
**ಮಹಾರುದ್ರನ ದ್ವೇಷ ಎಲ್ಲಿ ಹುಟ್ಟಿ, ಎಲ್ಲಿ ಅಡಗಿತ್ತು ಹೇಳಾ,**
**ನಾದ ಬಿಂದು ಕಳೆಗೆ ಅತೀತವಪ್ಪ**
**ಲಿಂಗವ ಭೇದಿಸಿ ಭೇದಿಸಲರಿಯದೆ**
**ಭಾವ ಭ್ರಮೆಯಿಂದಾಗಿ ನಾನಾ ಸಂದೇಹಕ್ಕೆ ಒಳಗಾಗಿ,**
**ಜೀವ ಪರಮನ ನೆಲೆಯ ಕಂಡೆಹನೆಂದು**
**ತಾವಿನಲ್ಲಿ ಕರ್ಕಶಗೊಂಬುವನಿಗೆ,**
**ಪ್ರಾಣಲಿಂಗಿಯೆಂಬ ಭಾವ ಒಂದೂ ಇಲ್ಲ, ನಿಃಕಳಂಕ**
**ಮಲ್ಲಿಕಾರ್ಜುನ ॥**

ಇದೇ ರೀತಿಯಿಂದ ಸೃಷ್ಟಿಯ ಉತ್ಪತ್ತಿಯ ಬಗ್ಗೆ ಮಹಾಜ್ಞಾನಿ ಚೆನ್ನಬಸವಣ್ಣನವರು ಮಾರ್ಮಿಕವಾಗಿ ವಚನ ರೂಪದಲ್ಲಿ ನಿರೂಪಿಸಿದ್ದಾರೆ.

**ಪರಾಪರದಲ್ಲಿ ಶಿವ, ಶಿವನಲ್ಲಿ ಶಕ್ತಿ,**
**ಶಕ್ತಿಯಲ್ಲಿ ನಾದ, ನಾದದಲ್ಲಿ ಬಿಂದು,**
**ಬಿಂದುವಿನಲ್ಲಿ ಕಳೆ, ಕಳೆಯಲ್ಲಿ ಸದಾಶಿವ,**
**ಸದಾಶಿವನಲ್ಲಿ ಮಹೇಶ್ವರ,**
**ಮಹೇಶ್ವರನಲ್ಲಿ ರುದ್ರ, ರುದ್ರನಲ್ಲಿ ವಿಷ್ಣು, ವಿಷ್ಣುವಿನಲ್ಲಿ ಬ್ರಹ್ಮ,**
**ಬ್ರಹ್ಮನಲ್ಲಿ ಆತ್ಮ, ಆತ್ಮನಲ್ಲಿ ಆಕಾಶ, ಆಕಾಶದಲ್ಲಿ ವಾಯು,**
**ವಾಯುವಿನಲ್ಲಿ ಅಗ್ನಿ, ಅಗ್ನಿಯಲ್ಲಿ ಅಪ್ಪು,**
**ಅಪ್ಪುವಿನಲ್ಲಿ ಪೃಥ್ವಿ, ಪೃಥ್ವಿಯಲ್ಲಿ ಊಪರಾದಿಗಳು,**
**ಉಪಾರಾದಿಗಳಲ್ಲಿ ಅನ್ನ, ಅನ್ನದಲ್ಲಿ ನರ, ಮೃಗ, ಪಕ್ಷಿ,**
**ಸ್ಥಾವರ ಜಂಗಮಾದಿಗಳು,**
**ಉದ್ಭವಿಸಿದ ಕ್ರಮದಲ್ಲಿ ಅಡಗಿದವು.**

ಇಲ್ಲಿ ಪರಾಪರದಲ್ಲಿ ಶಿವ ಎಂದರೆ ದೇವಕಣವೆಂತಲೇ ಕರೆಯಬಹುದು. ಅದು ಚಿದ್ರೂಪ ಶಕ್ತಿ. ಆ ಶಕ್ತಿಯಿಂದಲೇ ವಿಷ್ಣು, ಮಹೇಶ, ಬ್ರಹ್ಮ ಹುಟ್ಟಿದ್ದಾರೆ. ತದನಂತರ ಎಲ್ಲವೂ ಸಮಾನಂತರವಾಗಿ ಬೆಳೆದಿರುವುದು ಗೋಚರವಾಗುತ್ತದೆ. ಪರಿಸರದಲ್ಲಿಯ ಪ್ರಮುಖವಾದ ಪ್ರಥಮ ಕಣವೇ ಜೀವಕಣ, ಅದುವೇ ದೇವಕಣ. ಹೀಗಿತ್ತು ಶರಣರ ದೃಷ್ಟಿಕೋನ, ಅವರ ಶೋಧನೆ, ಸಾಧನೆಯ ಶಿಖರವಾಗಿ ಮೇರು ಪರ್ವತದಂತೆ ಬೆಳೆದಿರುವುದು ಇಂದು ವಚನಗಳ ನುಡಿಮುತ್ತಿನಲ್ಲಿ ಕಾಣಬಹುದಾಗಿದೆ.

## ದಾನಿಗಳ ಪಟ್ಟಿ — ಶ್ರೀ ಸಿದ್ಧಗಂಗಾ ಮಠ, ತುಮಕೂರು

ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೩೧೯೩. | ಶ್ರೀ ಪಿ.ಆರ್. ಸೋಮಶೇಖರ್<br>ಬೆಂಗಳೂರು | ೧,೨೦,೦೦೦ |
| ೩೧೯೪. | ಶ್ರೀ ಡಿ.ಸಿ. ಜಯದೇವಪ್ಪ<br>ದೊಡ್ಡೇರಿ | ೨,೦೦೧ |
| ೩೧೯೫. | ಶ್ರೀ ಜಿ. ಗುರುಸಿದ್ಧಪ್ಪ<br>ಬೆಂಗಳೂರು | ೫೦,೦೦೦ |
| ೩೧೯೬. | ಶ್ರೀ ಕೆ. ನಾಗರಾಜು<br>ಬೆಂಗಳೂರು | ೧೦,೦೦೦ |
| ೩೧೯೭. | ಶ್ರೀಮತಿ ನೀಲಮ್ಮ ಬಿ.ಎಸ್.<br>ಬಿ.ವಿ. ಎಕ್ಸ್‌ಟೆನ್ಷನ್ | ೫,೦೦೧ |
| ೩೧೯೮. | ಶ್ರೀ ಕೃಷ್ಣಯ್ಯ ಜಿ.<br>ಗೋವಿನಹಳ್ಳಿ | ೫,೦೦೧ |
| ೩೧೯೯. | ಶ್ರೀಮತಿ ಮಹಲಕ್ಷ್ಮಿದೇವಿ ಡಿ.<br>ತುಮಕೂರು | ೫,೦೦೧ |
| ೩೨೦೦. | ಶ್ರೀ ವಿರೂಪಾಕ್ಷಯ್ಯ ಎನ್.ವಿ.<br>ಬಿ.ವಿ.ಎಕ್ಸ್‌ಟೆನ್ಷನ್ | ೫,೦೦೧ |
| ೩೨೦೧. | ಶ್ರೀ ಶಾರದಮ್ಮ ಹೆಚ್.<br>ದೇವರಾಯಪಟ್ಟಣ | ೫,೦೦೧ |
| ೩೨೦೧. | ಶ್ರೀ ವಸಂತಮ್ಮ<br>ಶ್ರೀನಗರ | ೫,೦೦೧ |
| ೩೨೦೨. | ಶ್ರೀಮತಿ ರಮಾ ಎಂ.ಕೆ.<br>ತುಮಕೂರು | ೫,೦೦೧ |
| ೩೨೦೩. | ಶ್ರೀ ಗಂಗಮ್ಮ ಎಸ್.<br>ದೇವರಾಯಪಟ್ಟಣ | ೫,೦೦೧ |
| ೩೨೦೪. | ಶ್ರೀ ಮಹಾದೇವ<br>ಬಂಡೇಪಾಳ್ಯ | ೫,೦೦೧ |
| ೩೨೦೫. | ಶ್ರೀ ವಸಂತ್‌ಕುಮಾರ್ ಕೆ.ಹೆಚ್.<br>ಕ್ಯಾತಸಂದ್ರ | ೫,೦೦೧ |
| ೩೨೦೬. | ಶ್ರೀ ಶಶಿಕಲಾ ಪಿ.ಹೆಚ್.<br>ಶ್ರೀನಗರ | ೫,೦೦೧ |
| ೩೨೦೭. | ಶ್ರೀ ರಾಜಣ್ಣ ಜಿ.ವಿ.<br>ಅಂತರಸನಹಳ್ಳಿ | ೫,೦೦೧ |
| ೩೨೦೮. | ಶ್ರೀ ಮಂಜುನಾಥ್ ಡಿ.ಪಿ.<br>ಬಿ.ವಿ.ಎಕ್ಸ್‌ಟೆನ್ಷನ್ | ೫,೦೦೧ |
| ೩೨೦೯. | ಶ್ರೀ ಮಹಾರುದ್ರಯ್ಯ ಹೆಚ್.ಪಿ.<br>ಶ್ರೀ ಸಿದ್ಧಗಂಗಾಮಠ | ೫,೦೦೧ |
| ೩೨೧೦. | ಶ್ರೀ ನಾಗರತ್ನ ಕೆ.ಆರ್.<br>ಶ್ರೀನಗರ | ೫,೦೦೧ |
| ೩೨೧೧. | ಶ್ರೀ ಲಕ್ಷ್ಮಣಗೌಡ ಆರ್.<br>ಕ್ಯಾತಸಂದ್ರ | ೫,೦೦೧ |
| ೩೨೧೨. | ಶ್ರೀ ಅರುಣೋದಯ ಪಿ.<br>ಬಸವಾಪಟ್ಟಣ | ೫,೦೦೧ |
| ೩೨೧೩. | ಶ್ರೀ ಮೋಹನ್‌ಕುಮಾರ್ ಆರ್.ಹೆಚ್.<br>ಶ್ರೀನಗರ | ೫,೦೦೧ |
| ೩೨೧೪. | ಶ್ರೀಮತಿ ವನಜಾಕ್ಷಮ್ಮ ಎಸ್.<br>ಬಸವಾಪಟ್ಟಣ | ೫,೦೦೧ |
| ೩೨೧೫. | ಶ್ರೀ ಜಯಣ್ಣ ಎನ್.ಜಿ.<br>ಸಂಗಾಪುರ, ಗೊಲ್ಲಹಳ್ಳಿ | ೫,೦೦೧ |
| ೩೨೧೬. | ಶ್ರೀ ರಮೇಶ್ ಟಿ.ಎನ್.<br>ತುಮಕೂರು | ೫,೦೦೧ |
| ೩೨೧೭. | ಶ್ರೀಮತಿ ಸುನಂದಮ್ಮ ಜಿ.ಕೆ.<br>ಬೆಂಗಳೂರು | ೫,೦೦೧ |
| ೩೨೧೮. | ಶ್ರೀ ಪರಮೇಶ್ವರಪ್ಪ ಎಸ್.ಎನ್.<br>ಹೆಗ್ಗೆರೆ | ೫,೦೦೧ |
| ೩೨೧೯. | ಶ್ರೀ ಚಿಕ್ಕಲಕ್ಕಯ್ಯ ಕೆ.ಪಿ.<br>ಕುಂದೂರು | ೫,೦೦೧ |
| ೩೨೨೦. | ಶ್ರೀ ಗುರುಮೂರ್ತಿ ಎಂ.<br>ಅಂತರಸನಹಳ್ಳಿ | ೫,೦೦೧ |
| ೩೨೨೧. | ಶ್ರೀ ಕೊಟಪ್ಪ ಸಿ.<br>ಮಂಗಾಪುರ | ೫,೦೦೧ |
| ೩೨೨೨. | ಶ್ರೀ ಬಸವರಾಜಪ್ಪ ಆರ್.ಹೆಚ್.<br>ಹೆಬ್ಬಾಳ | ೫,೦೦೧ |
| ೩೨೨೩. | ಶ್ರೀ ರಾಮಚಂದ್ರಯ್ಯ ಬಿ.ಎನ್.<br>ಬಂಧಕುಂಟೆ | ೫,೦೦೧ |
| ೩೨೨೪. | ಶ್ರೀ ಹನುಮಂತರಾಜು ಎ.<br>ತೊರೆರಾಮನಹಳ್ಳಿ | ೫,೦೦೧ |
| ೩೨೨೫. | ಶ್ರೀ ಗಜೇಂದ್ರ ಎಸ್.ಎಂ.<br>ತುಮಕೂರು | ೫,೦೦೧ |
| ೩೨೨೬. | ಶ್ರೀ ಸೋಮಶೇಖರಯ್ಯ ಬಿ.<br>ತುಮಕೂರು | ೫,೦೦೧ |
| ೩೨೨೭. | ಶ್ರೀ ಕುಮಾರಸ್ವಾಮಿ ಕೆ.ಎಸ್.<br>ತುಮಕೂರು | ೫,೦೦೧ |

(ಮುಂದುವರಿಯುವುದು)

"Siddaganga" Monthly - Postal Reg. No. L2/RNP/385/TMR/2021-23
Posted at RMS, Tumkur-572 102

RNI No. 17139/69







To

LM- 6263.
P, Jayaprakash,
S/o. Late S. Prabhaiah.,
No.655, 2nd cross,'D' Block,
Rajajinagar. 2nd Stage
**Bangalore - 560010**




If undelivered please return to :
Editor
Siddaganga Monthly Magazine
Siddaganga Math
Tumkur-572 104